# ಅಪರಂಜಿ

ತಿಳಿನಗೆಯ ಕಾರಂಜಿ



ಜುಲೈ - 2011



ಭ್ರಷ್ಟಾಚಾರ **ಡಯಾಬಿಟೀಸ್** ಇದ್ದಂತೆ...
ನಿಯಂತ್ರಿಸಬಹುದು, ತಡೆಗಟ್ಟಲು ಸಾಧ್ಯವಿಲ್ಲ!



ಬಿಡಿ ಪ್ರತಿ: ರೂ. **10.00**

# ಅಪರಂಜಿ



ತಿಳಿನಗೆಯ ಕಾರಂಜಿ



ಸಂಪುಟ 28
ಸಂಚಿಕೆ - 10
ಜುಲೈ - 2011



ಚಂದಾ ವಿವರ:
ಬಿಡಿ ಪ್ರತಿ: ರೂ. 10/-
ವಾರ್ಷಿಕ ಚಂದಾ: ರೂ. 100/-
ಹತ್ತು ವರ್ಷದ ಚಂದಾ: ರೂ. 750/-

ಸಂಪರ್ಕ ಸಮಯ:
ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ

## ಈ ಸಂಚಿಕೆಯಲ್ಲಿ.....



ಮುಖಪುಟ ವ್ಯಂಗ್ಯ ಚಿತ್ರ - ಜಿ.ಎಸ್. ನಾಗನಾಥ್

ಮುದ್ರಣ : ರವಿ ಗ್ರಾಫಿಕ್ಸ್ - ಅಕ್ಷರ ಜೋಡಣೆ: ಒಮೇಗಾ ಲೇಸರ್‌ಟೆಕ್
ಪ್ರಕಾಶಕರು: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ,
ಬೆಂಗಳೂರು - 560 003. email: aparanji@hotmail.com

ಸಂಪರ್ಕ ವಿಳಾಸ: **ಶ್ರೀ ಬೇಲೂರು ರಾಮಮೂರ್ತಿ**, ಉಪ ಸಂಪಾದಕರು, ಅಪರಂಜಿ ಮಾಸಪತ್ರಿಕೆ,
ನಂ. 96, 'ಸುಕೇಶವ' ಎರಡನೇ ಅಡ್ಡರಸ್ತೆ, 20ನೇ ಮುಖ್ಯರಸ್ತೆ, ಮೊದಲನೇ ಫೇಸ್, ಬಿ.ಟಿ.ಎಂ. ಲೇಔಟ್,
ಬೆಂಗಳೂರು - 560 068. ದೂರವಾಣಿ: 080-26688488. email: belururamamurthy@gmail.com

# ಅಪರಂಜಿ ಕಿಡಿ

● ಪ್ರಕಾಶ್



“ಛಲ, ವಿಶ್ವಾಸ ಇದ್ದರೆ ಬಡತನ ಅಡ್ಡಿಯಿಲ್ಲ” – ಹೇಳಿಕೆ

**● ಇದನ್ನು ನಮ್ಮ ರಾಜಕಾರಣಿಗಳಿಗೆ ಮನದಟ್ಟು ಮಾಡಿಸಬೇಕು !!**

★★★

“ಬಾಬಾಗೆ ಸಿ.ಎಂ. ಬೆಂಬಲ” – ಸುದ್ದಿ

**● ಹಾಗಲಕಾಯಿಗೆ............. !!**

★★★

ಡೆಲ್ಲಿ ಮಾತನ್ನು ನಂಬುವಂತಿಲ್ಲ – ಪಾಕಿಸ್ತಾನ

**● ಆ ಪಾ(ತ)ಕಿಗಳು ಇನ್ನೇನು ತಾನೇ ಹೇಳಿಯಾರು ??**

★★★

ಇಸ್ಕಾನ್ ಐ.ಪಿ.ಎಲ್. : ಮುಂಬೈ **vs** ಬೆಂಗಳೂರು !!

★★★

ಲಕ್ಷ್ಮಿ ವರಿಸಿದ ರೋಹನ್ ಮೂರ್ತಿ – ಸುದ್ದಿ

**● N.R.N. ಮನೆಗೆ ಮತ್ತಷ್ಟು ಲಕ್ಷ್ಮಿ ಹರಿದು ಬಂದಂತಾಯಿತು !!**

★★★

# ಕೊರವಂಜಿ ಅಪರಂಜಿ ಟ್ರಸ್ಟ್

ಆಯೋಜಿಸಿರುವ

# ಪಡುಕೋಣೆ ರಮಾನಂದರಾವ್ ಸ್ಮಾರಕ ನಗೆ ಲೇಖನ ಸ್ಪರ್ಧೆ 2011

**ನಾಡಿನ ಪ್ರಖ್ಯಾತ ನಗೆಬರಹಗಾರ ಪಡುಕೋಣೆ ರಮಾನಂದರಾವ್ ಸ್ಮಾರಕ ನಗೆ ಲೇಖನ ಸ್ಪರ್ಧೆಯನ್ನು ಕೊರವಂಜಿ ಅಪರಂಜಿ ಟ್ರಸ್ಟ್ ಆಯೋಜಿಸಿದೆ. ಸ್ಪರ್ಧೆಯ ನಿಯಮಗಳು ಹೀಗಿವೆ.**

1. ಒಬ್ಬರು ಒಂದು ಲೇಖನವನ್ನು ಮಾತ್ರ ಕಳುಹಿಸಬೇಕು
2. ಲೇಖನ ಫುಲ್‌ಸ್ಕೇಪ್ ಹಾಳೆಯಲ್ಲಿ 3 ರಿಂದ 4 ಪುಟಗಳಿರಬೇಕು.
3. ಉತ್ತಮವಾದ ನಗೆಲೇಖನಕ್ಕೆ ಪ್ರಥಮ (ರೂ.1000/-), ದ್ವಿತೀಯ (ರೂ.750/-) ಹಾಗೂ ಮೂರನೇ (ರೂ.500/-) ಬಹುಮಾನಗಳಿರುತ್ತವೆ.
4. ಬಹುಮಾನಿತ ಲೇಖನಗಳನ್ನು ಅಪರಂಜಿ ವಿಶೇಷಾಂಕದಲ್ಲಿ ಪ್ರಕಟಿಸಲಾಗುವುದು.
5. ತೀರ್ಪುಗಾರರ ಮೆಚ್ಚುಗೆ ಪಡೆದ ನಗೆ ಲೇಖನಗಳನ್ನು ಅಪರಂಜಿಯಲ್ಲಿ ಕ್ರಮೇಣ ಬಳಸಿಕೊಳ್ಳಲಾಗುವುದು.
6. ಸ್ಪರ್ಧೆಗೆ ಯಾವುದೇ ಪ್ರವೇಶ ಶುಲ್ಕವಿಲ್ಲ, ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ ಹಾಗೂ ಲೇಖನಗಳನ್ನು ವಾಪಸ್ ಕಳುಹಿಸಲಾಗುವುದಿಲ್ಲ.
7. ಲೇಖನಗಳನ್ನು : ಬೇಲೂರು ರಾಮಮೂರ್ತಿ, ಉಪಸಂಪಾದಕರು, ಅಪರಂಜಿ, 'ಸುಕೇಶವ' ನಂ. 96, 2ನೇ ಅಡ್ಡ ರಸ್ತೆ, 20ನೇ ಮುಖ್ಯ ರಸ್ತೆ, ಬಿ.ಟಿ.ಎಂ. ಬಡಾವಣೆ 1ನೇ ಹಂತ, ಬೆಂಗಳೂರು – 560 068 ಈ ವಿಳಾಸಕ್ಕೆ ಕಳುಹಿಸಬೇಕು.
8. ಲೇಖನಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 31.10.2011.




**ಮೊ**ನ್ನೆ ನಮ್ಮ ಅಪರಂಜಿ ಬಳಗದ ಸದಸ್ಯರು ಹಲವರನ್ನು ಕರೆದುಕೊಂಡು ಮೈಸೂರಿಗೆ ಹೋಗುವ ಪ್ರಸಂಗ ನನಗೆ ಒದಗಿ ಬಂತು. ಕಳೆದ ಇಪ್ಪತ್ತೇಳು ವರ್ಷಗಳ ಎಲ್ಲಾ ಅಪರಂಜಿ ಸಂಚಿಕೆಗಳನ್ನೂ ಒಂದು ಸಿ.ಡಿ.ಯೊಳಗೆ ಅಳವಡಿಸಿ ಓದುಗರಿಗೆ ನೀಡುವ ಯೋಜನೆಗೆ ಭಾರತೀಯ ವಿದ್ಯಾಭವನದವರು ತಾತ್ವಿಕವಾಗಿ ಒಪ್ಪಿಗೆ ನೀಡಿದ್ದರಿಂದ ಕೆಲಸ ಪ್ರಾರಂಭ ಮಾಡುವ ಮೊದಲ ಹೆಜ್ಜೆಯಾಗಿ ಈ ಮೈಸೂರು ಯಾತ್ರೆಯನ್ನು ಕೈಗೊಂಡಿದ್ದೆವು. ಸಂಚಿಕೆಗಳ ವಾರ್ಷಿಕ ಸಂಪುಟಗಳನ್ನೆಲ್ಲಾ ಕಾರಿನ ಡಿಕ್ಕಿಯಲ್ಲಿ ತುಂಬಿಕೊಂಡು, ಮೈಸೂರು ರಸ್ತೆಯಲ್ಲಿ ನಡೆಯುತ್ತಿರುವ ಮೆಟ್ರೋ ಕಾಮಗಾರಿಯ ಚಕ್ರವ್ಯೂಹವನ್ನು ದಾಟಿ, ಹೈವೇ ತಲುಪಿ ಕದಂಬಂ ಸೇರುವ ಹೊತ್ತಿಗೆ ಬೆಳಗ್ಗೆ ಒಂಭತ್ತು ಘಂಟೆ ಹೊಡೆದಿತ್ತು. ನಾವು ಪ್ರತಿಬಾರಿ ಮೈಸೂರಿಗೆ ಹೋಗುವಾಗಲೂ ಬೆಳಗಿನ ಉಪಹಾರಕ್ಕಾಗಿ ಕಾರನ್ನು ಇಲ್ಲಿ ನಿಲ್ಲಿಸಿ, ತಿಂಡಿ ತಿನ್ನುವಾಗ ಮುಂದಿನ ಕೆಲಸಗಳ ಬಗ್ಗೆ ಪ್ಲಾನ್ ಮಾಡುವುದು ವಾಡಿಕೆ. ಗೆಳೆಯ ಆನಂದ ಕಳೆದ ಹಲವು ಬಾರಿ ನಮ್ಮ ಜೊತೆ ಬಂದಿದ್ದಾಗ ತಮ್ಮದೊಂದು ಅಹವಾಲನ್ನು ಮಂಡಿಸಿದ್ದರು. ಮೈಸೂರಿನಲ್ಲಿ ಕೆಲಸ ಮುಗಿಸಿ ಹಿಂತಿರುಗುವಾಗ, ಕರಿಘಟ್ಟಕ್ಕೆ ಹೋಗಿ ಶ್ರೀನಿವಾಸ ದೇವರ ದರ್ಶನ ಮಾಡಿಕೊಂಡು, ಅದಕ್ಕಿಂತ ಹೆಚ್ಚಾಗಿ ಅಲ್ಲಿ ಕೊಡುವ ಪುಳಿಯೋಗರೆ ಪ್ರಸಾದವನ್ನು ಸ್ವೀಕರಿಸಿ ಬೆಂಗಳೂರನ್ನು ಸೇರೋಣ ಎಂಬುದು ಆನಂದರ ಸಲಹೆ. ನಾವುಗಳೂ ಆ ಸಲಹೆ ಸಾಧ್ಯವಾದದ್ದೇ ಎಂದು ಅದನ್ನು ಅನುಮೋದಿಸಿದ್ದೂ ನಿಜ. ಆದರೆ ಮೈಸೂರಿನಲ್ಲಿ ಭೇಟಿ ಮಾಡಬೇಕಾದವರನ್ನೆಲ್ಲಾ ಭೇಟಿ ಮಾಡಿ, ಊಟವಾದ ನಂತರ, ದೇವರಾಜಾ ಮಾರುಕಟ್ಟೆಗೆ ಹೋಗಿ, ಅಲ್ಲಿ ಈರನಗೆರೆ ಬದನೇಕಾಯಿಯನ್ನು ಹುಡುಕಿ, ನಮ್ಮಲ್ಲಿಲ್ಲದ ಒಂದು ತಜ್ಞತೆಯನ್ನು ಆ ಆಯ್ಕೆಯಲ್ಲಿ ಪ್ರಯೋಗಿಸಿ ಖರೀದಿಯಲ್ಲಿ ಸಾಕಷ್ಟು ಪೆದ್ದುತನವನ್ನು ಪ್ರದರ್ಶಿಸಿ, ಬೆಂಗಳೂರು ದಾರಿ ಹಿಡಿಯುವ ವೇಳೆಗೆ ಕರಿಘಟ್ಟಕ್ಕೆ ಈ ಬಾರಿ ಹೋಗದಿರುವುದಕ್ಕೆ ಸಾಕಷ್ಟು ಕುಂಟು ನೆವಗಳು ನಮಗೆಲ್ಲಾ ಹೊಳೆಯಲು ಪ್ರಾರಂಭವಾಗುತ್ತಿತ್ತು. ಅಂತೂ ಇಲ್ಲಿನವರೆಗೆ ನಮ್ಮ ಕರಿಘಟ್ಟ ಯಾತ್ರೆ ಇನ್ನೂ ಸಫಲವಾಗಿಲ್ಲ, ಇರಲಿ.

ಎಂದಿನಂತೆ ತಿಂಡಿ ತಿನ್ನುವಾಗ ನಮ್ಮ ಪ್ಲಾನಿಂಗ್ ಶುರುವಾಯಿತು. ಹಿಂತಿರುಗುವಾಗ, ಈರನಗೆರೆ ಖರೀದಿ ಮುಗಿದು, ಮದ್ದೂರಿನ ಮದ್ದೂರುವಡೆ ಖರೀದಿಗೆ ಮುಂಚೆ ಏನು ಮಾಡಬಹುದು ಎಂಬುದೇ ಆಗ ನಮ್ಮ ಮುಂದಿದ್ದ ಜ್ವಲಂತ ಪ್ರಶ್ನೆ. ಈ ಬಾರಿ ಆನಂದ ನಮ್ಮೊಡನೆ ಬಂದಿರಲಿಲ್ಲ, ಹಾಗಾಗಿ ಕರಿಘಟ್ಟ ಯಾತ್ರೆ ರೂಲ್‌ಔಟ್ ಆಯಿತು. ಮೂಲ ಸಲಹೆಯನ್ನು ನೀಡಿದವರೇ ಇಲ್ಲದಿದ್ದಾಗ ಕರಿಘಟ್ಟಕ್ಕೆ ಹೋಗಿ ಮಿತ್ರದ್ರೋಹ ಮಾಡಬಹುದೇ. ಕರಿಘಟ್ಟದ ಶ್ರೀನಿವಾಸ ದೇವರು ಮೆಚುತ್ತಾನೆಯೇ. ಶ್ರೀರಂಗ ಪಟ್ಟಣದ ಬಳಿ ಇರುವ ಗೋಸಾಯಿ ಘಾಟ್‌ಗೆ ಹೋಗಿ, ಕಾವೇರಿನದಿಯ ದಂಡೆಯಲ್ಲಿನ ಮೆಟ್ಟಲುಗಳ ಮೇಲೆ ಕುಳಿತು, ಮಂಡಕ್ಕಿ ಪುರಿಯನ್ನು ತಿಂದು ಬಂದರೆ ಹೇಗೆ ಅಂತ ನಾನು ಕೇಳಿದೆ. ಅದರ

ನಂತರದ ಚರ್ಚೆ ಮಂಡಕ್ಕಿ ಪುರಿಗೆ ಹರಿದಿದ್ದರಿಂದ ಹಿಂದಕ್ಕೆ ಬರುವ ಪ್ರಯಾಣದ ವಿಷಯವನ್ನು ಅಲ್ಲಿಗೇ ಮುಗಿಸಿದೆವು.

ಮೈಸೂರಿನಲ್ಲಿರುವ ಶ್ರೀರಂಗ ಡಿಜಿಟಲ್ ಟೆಕ್ನಾಲಜೀಸ್ ಸಂಸ್ಥೆಯ ಯೋಗಾನಂದ ಹಾಗೂ ಅವರ ದಕ್ಷ ಸಹೋದ್ಯೋಗಿ ಯುವಕ ಅರ್ಜುನ್ ಇವರುಗಳೇ ನಮ್ಮ ಸಿ.ಡಿ. ಕೆಲಸ ಮಾಡಿಕೊಡುವವರು. ನಮ್ಮ ಅಪರಂಜಿ ಅಂತರ್ಜಾಲ ತಾಣವನ್ನೂ ಸಹಾ ಇವರೇ ನಿರ್ವಹಿಸುತ್ತಿದ್ದಾರೆ. ಅವರ ಆಫೀಸನ್ನು ತಲುಪಿ ಒಳಗೆ ಕುಳಿತೆವು. ಯೋಗಾನಂದ ಇನ್ನೂ ಬಂದಿರಲಿಲ್ಲ. ಅರ್ಜುನ್‌ಗೆ ನಾವು ತಂದಿದ್ದ ವಾರ್ಷಿಕ ಸಂಚಿಕೆಗಳನ್ನೆಲ್ಲಾ ವರ್ಗಾಯಿಸಿ ಮುಂದಿನ ಹಂತಗಳ ಬಗ್ಗೆ ಮಾತನಾಡಲು ಪ್ರಾರಂಭಿಸಿದೆವು. ಅಷ್ಟರಲ್ಲಿ ನನಗೆ ಅಭಿಮುಖವಾಗಿ ಕುಳಿತಿದ್ದ ಬೇಲೂರ್ ಕಣ್ಣು ಗೋಡೆಯಮೇಲಿದ್ದ ಗಡಿಯಾರದ ಕಡೆಗೆ ಹೊರಳಿತು.. ಅರೆ, ಇದೇನು ನಿಮ್ಮ ಗಡಿಯಾರ ರಿವರ್ಸ್ ಓಡ್ತಾ ಇದೆ ಅಂತ ಬೇಲೂರ್ ಉದ್ಗರಿಸಿದ. ನಾನು ಕತ್ತನ್ನು ಹಿಂದಕ್ಕೆ ತಿರುಗಿಸಿ ಗೋಡೆಯ ಮೇಲಿದ್ದ ಗಡಿಯಾರವನ್ನು ನೋಡಿದೆ. ಹೌದಲ್ಲಾ, ಸೆಕೆಂಡ್ ಮುಳ್ಳು ರಿವರ್ಸ್ ದಿಕ್ಕಿನಲ್ಲಿ ತಿರುಗುತ್ತಿತ್ತು. ಸೆಲ್‌ನ ಏನಾದರೂ ತಳಕಂಪಳಕ ಹಾಕಿರಬಹುದೇ ಅರ್ಜುನ್? ಅಂತ ನಾನು ನನ್ನ ತಾಂತ್ರಿಕ ಜ್ಞಾನ ಪ್ರದರ್ಶಿಸಿದೆ. ಅರ್ಜುನ್ ನಗುತ್ತಾ, ಗಡಿಯಾರದ ಮುಖದ ಮೇಲಿರುವ ಅಂಕಿಗಳನ್ನ ಸ್ವಲ್ಪ ನೋಡ್ತೀರಾ? ಅಂತ ಹೇಳಿದ. ನಾನು ನೋಡಿದೆ. ಅಂಕಿಗಳೂ ಸಹಾ ವಿರುದ್ಧ ದಿಕ್ಕಿನಲ್ಲಿ ಕುಳಿತಿದ್ದವು. ಹನ್ನೊಂದು ಇರಬೇಕಾದ ಕಡೆ ಒಂದು, ಹತ್ತು ಇರಬೇಕಾದ ಕಡೆ ಎರಡು ಇತ್ಯಾದಿ. ಗಡಿಯಾರ ನಿಂತಿರಲಿಲ್ಲ, ಸೆಕೆಂಡ್ ಮುಳ್ಳು ಓಡುತ್ತಲೇ ಇತ್ತು. ಆಗ ನನ್ನ ವಾಚಿನಲ್ಲಿ ಹನ್ನೊಂದೂವರೆ ಆಗಿತ್ತು. ಈ ರಿವರ್ಸ್ ಗಡಿಯಾರವೂ ಕರಾರುವಾಕ್ಕಾಗಿ ಹನ್ನೊಂದೂವರೆಯನ್ನೇ ಸೂಚಿಸುತ್ತಿತ್ತು.





**ಅಪರಂಜಿ ಓದುಗರಿಗೊಂದು ಸಂತಸದ ಸುದ್ದಿ. ಈ ತಿಂಗಳಿನಿಂದ ಸುಪ್ರಸಿದ್ಧ ಜ್ಯೋತಿಷಿ ಸತ್ಯೋತ್ತಮಾಚಾರ್ಯರಿಂದ ಮಾಸ ಭವಿಷ್ಯ ಪ್ರಕಟವಾಗಲಿದೆ. (ಪುಟ 20) ಅವರ ಭವಿಷ್ಯ ನಿಜವೇ ಆದರೆ ಅದಕ್ಕೆ ನಾವು ಜವಾಬ್ದಾರರಾಗುವುದಿಲ್ಲ!**

ನಮ್ಮ ಮುಖಗಳಲ್ಲಿದ್ದ ಪ್ರಶ್ನಾರ್ಥಕ ಚಿಹ್ನೆಗಳನ್ನು ನೋಡಿ ಅರ್ಜುನ್ ಉತ್ತರಿಸಲು ಮುಂದಾದ. ಯೋಗಾನಂದ್ ಅವರು ಆ ಗಡಿಯಾರಾನ ಸ್ಪೆಷಲ್ ಆಗಿ ಮಾಡಿಸಿದ್ರು. ಗಡಿಯಾರದ ಮುಖ ಹೊಸದಾಗಿ ತಯಾರಿಸಿದ್ದು. ಒಳಗಿನ ಮೂವ್‌ಮೆಂಟ್‌ನ ಮಾರ್ಕೆಟ್ ಹತ್ರ ಇರೋ ಒಬ್ಬ ಗಡಿಯಾರ ರಿಪೇರಿ ಮಾಡೋನು ಬಿಚ್ಚಿ ವಿರುದ್ಧ ದಿಕ್ಕಿನಲ್ಲಿ ತಿರುಗೋ ಹಾಗೇ ಮಾಡ್ದ. ಸೆಲ್‌ನ ರಿವರ್ಸ್ ಹಾಕಿದ್ರೆ ಗಡಿಯಾರ ನಡೆಯೋದೇ ಇಲ್ಲ. ಸರಿ, ನನ್ನ ಗಡಿಯಾರ ಜ್ಞಾನ, ಈರನಗೆರೆ ಖರೀದಿಗಿಂತ ಹೆಚ್ಚೇನೂ ಬೇರೆಯಲ್ಲ ಎಂಬುದು ಖಾತರಿಯಾಯಿತು.

ಅಷ್ಟರಲ್ಲಿ ಯೋಗಾನಂದ್ ಬಂದರು. ಏನಿದು, ಈ ವಿಚಿತ್ರ ಗಡಿಯಾರ ಯೋಗಾನಂದ್? ಇದರ ಪ್ರಯೋಜನವಾದರೂ ಏನು? ಅಂತ ಕುತೂಹಲದಿಂದ ಕೇಳಿದೆ. ಯೋಗಾನಂದ್ ಉತ್ತರಿಸಲು ಮುಂದಾದರು.

'ಮೊದಲಿನಿಂದ ನನಗೆ ಈ ಕ್ಲಾಕ್ ವೈಸ್, ಆಂಟಿ ಕ್ಲಾಕ್ ವೈಸ್ ಕಲ್ಪನೆಗಳ ಬಗ್ಗೆ ಅತೀವ ಕುತೂಹಲ. ಗಡಿಯಾರದ ಮುಳ್ಳು ಬಲಗಡೆಯಿಂದ ಶುರುವಾಗಿ ಕೆಳಕ್ಕೆ ಬಂದು ಎಡಕ್ಕೆ ಚಲಿಸಿ ಮೇಲಕ್ಕೆ ಹೋಗುತ್ತಲ್ಲವೇ. ಇದನ್ನೇ ಅಲ್ಲವೇ ನಾವು ಕ್ಲಾಕ್‌ವೈಸ್ ಎನ್ನುವುದು. ಮೊಟ್ಟಮೊದಲ ಗಡಿಯಾರಗಳನ್ನು ಸೃಷ್ಟಿಸಿದಾಗ ಮುಳ್ಳುಗಳಿಗೆ ಈ ದಿಕ್ಕಿನ ಸುತ್ತುವಿಕೆಯನ್ನೇ ಏಕೆ ಆರಿಸಿಕೊಂಡರು ಗೊತ್ತೇ?' ಯೋಗಾನಂದ್ ಕೇಳಿದರು.

'ಗೊತ್ತಿಲ್ಲ ಎಂದೆ.' ಇದು ನನ್ನ ಅತ್ಯಂತ ಬಳಕೆಯಲ್ಲಿರುವ ಉತ್ತರವೂ ಹೌದು.

'ಗಡಿಯಾರಗಳ ಬಳಕೆಗೆ ಮುಂಚೆ ಕಾಲವನ್ನ ತಿಳಿಯಲು ಸನ್‌ಡಯಲ್ ಅಥವಾ ನೆರಳಿನ ಗಡಿಯಾರ ಬಳಕೆಯಲ್ಲಿತ್ತು. ಇದರಲ್ಲಿ ಮುಳ್ಳಿನ ನೆರಳು ಈಗ ಗಡಿಯಾರಗಳ ಮುಳ್ಳುಗಳು ತಿರುಗುವ ದಿಕ್ಕಿನಲ್ಲೇ ತಿರುಗುತ್ತಿತ್ತು. ಹಾಗಾಗಿ ಸನ್‌ಡಯಲ್ ನಂತರ ಆವಿಷ್ಕರಿಸಿದ ಮುಳ್ಳಿನ ಗಡಿಯಾರಕ್ಕೂ ಇದೇ ದಿಕ್ಕಿನ ತಿರುಗುವಿಕೆಯನ್ನ ಅಳವಡಿಸಿದ್ರು. ಇನ್ನು ಈ ಗಡಿಯಾರದ ಪ್ರಯೋಜನ ಕೇಳಿದ್ರೆ. ನೋಡಿ, ನಿಮಗೆ ತಿಳಿದಿರೋ ಹಾಗೆ ನಾನು ಗಣಿತದ ಉಪನ್ಯಾಸಕ. ನನ್ನ ವಿದ್ಯಾರ್ಥಿಗಳು ಅನೇಕ ಬಾರಿ ಬರೀ ಗಣಿತದ ಸಮಸ್ಯೆಗಳನ್ನ ಬಿಡಿಸಿದ್ರೇ ತಮ್ಮ ಕೆಲಸ ಮುಗೀತು ಅಂದುಕೊಂಡಿರ್ತಾರೆ. ಎಲ್ಲರೂ ತುಳಿದ ಹಾದೀನ ಬಿಟ್ಟು ಸ್ವಲ್ಪ ಎಡವಟ್ಟಿನ ದಾರಿ ಹಿಡಿಯೋದನ್ನ ಕಲಿಯೋದು ಸೃಜನಶೀಲತೆಯ ಅಂಕುರಕ್ಕೆ ಅತಿ ಮುಖ್ಯ. ಈ ಗಡಿಯಾರ ನೋಡಿದ ತಕ್ಷಣ ಅರೆ, ಅಂತ ಒಂದು ಉದ್ಗಾರ ಹೊರಡುತ್ತಲ್ಲ, ಅಲ್ಲಿ ಸೃಜನಶೀಲತೆಯ ಚಿಂತನೆ ಪ್ರಾರಂಭವಾಗುತ್ತೆ. ಅದೇ ಇದರ ಮುಖ್ಯ ಪ್ರಯೋಜನ ಎಂದರು ಯೋಗಾನಂದ್.

ಯುವಕ ಅರ್ಜುನ್, ಈ ಕ್ಲಾಕ್‌ವೈಸ್ ಮತ್ತು ಆಂಟಿ ಕ್ಲಾಕ್‌ವೈಸ್ ಮನುಷ್ಯನ ಮಿದುಳಿನಲ್ಲೇ ಅಚ್ಚೊತ್ತಿರುತ್ತೆ ಅಂತ ಗೊತ್ತೇನು? ಇದನ್ನ ಯೂ ಟ್ಯೂಬಿನಲ್ಲಿರೋ ನರ್ತಿಸುತ್ತಿರುವ ತರುಣಿ ಎಂಬ ವಿಡಿಯೋ ಕ್ಲಿಪ್ಪನ್ನು ನೋಡಿದರೆ ಬಹು ಚೆನ್ನಾಗಿ ಅರ್ಥ ಆಗುತ್ತೆ, ಸ್ವಲ್ಪ ತಡೀರಿ, ಈ ಲ್ಯಾಪ್‌ಟಾಪಿನಲ್ಲಿ ಅದನ್ನ ಹಾಕಿ ತೋರಿಸ್ತೇನೆ ಅಂತ ಹೇಳಿ ತನ್ನ ಲ್ಯಾಪ್‌ಟಾಪನ್ನು ಆನ್ ಮಾಡಿದ. ನಾವೆಲ್ಲಾ ನಮ್ಮ ಕುರ್ಚಿಗಳನ್ನು ಸ್ಕ್ರೀನ್ ಕಾಣೋಹಾಗೆ

ತಿರುಗಿಸಿಕೊಂಡು ಕುಳಿತೆವು. ಯೂಟ್ಯೂಬಿನ ಕ್ಲಿಪ್ಪಿನಲ್ಲಿ ಒಬ್ಬ ನರ್ತಕಿಯ ಸಿಲೆಟ್ ಮಾತ್ರ ಕಾಣಿಸುತ್ತಿತ್ತು. ಅವಳು ತನ್ನ ಕೈಗಳನ್ನು ಹೊರಕ್ಕೆ ಚಾಚಿ, ತುದಿಗಾಲಿನ ಮೇಲೆ ನಿಂತು ತಿರುಗುತ್ತಿದ್ದಳು. ತಿರುಗುತ್ತಲೇ ಇದ್ದಳು ಕ್ಲಿಪ್ ಮುಗಿಯುವವರೆಗೂ.



ನರ್ತಕಿ ಯಾವ ದಿಕ್ಕಿನಲ್ಲಿ ತಿರಗ್ತಾ ಇದ್ಲು ಹೇಳ್ತೀರಾ? ಅಂತ ಅರ್ಜುನ್ ಸಭಿಕರನ್ನ ಕೇಳಿದ. ನಾನು, ಕ್ಲಾಕ್‌ವೈಸ್. ತೀರ ಅಷ್ಟೂ ಗೊತ್ತಾಗಲ್ವೇ ಅಂತ ಹೇಳಿದೆ. ರಾಜಗೋಪಾಲ್, ಖಂಡಿತ ಇಲ್ಲ, ಅವಳು ತಿರುಗುತ್ತಿದ್ದದ್ದು ಆಂಟಿ ಕ್ಲಾಕ್‌ವೈಸ್. ಅಂತ ಸಾಧಿಸಿದ. ಇದ್ದ ನಾಲ್ಕು ಜನರಲ್ಲಿ ಎರಡು ಕ್ಲಾಕ್‌ವೈಸ್ ಎರಡು ಆಂಟಿ ಕ್ಲಾಕ್‌ವೈಸ್ ಅಂತ ಮತ ಚಲಾವಣೆ ಆಯಿತು.

ಯೋಗಾನಂದ್ ನಗುತ್ತಾ, 'ಎಲ್ಲರ ಅಭಿಪ್ರಾಯಗಳೂ ಸರಿಯೇ. ವಾಸ್ತವವಾಗಿ ಆಕೆ ತಿರುಗುವ ದಿಕ್ಕು ನೋಡುವವನ ಎಡ ಮಿದುಳು ಪ್ರಾಮುಖ್ಯವಾಗಿದೆಯೋ ಅಥವಾ ಬಲ ಮಿದುಳು ಮುಂದಿದೆಯೋ ಅನ್ನುವುದನ್ನ ಅವಲಂಬಿಸಿರುತ್ತೆ. ಎಡ ಮಿದುಳು ಮೇಲುಗೈ ಪಡೆದಿದ್ದರೆ ಅಂತಹವರಿಗೆ ಆಕೆ ಕ್ಲಾಕ್‌ವೈಸ್ ತಿರುಗುತ್ತಿರುವಂತೆ ಕಾಣುತ್ತೆ. ಬಲ ಮಿದುಳಿನವರಿಗೆ ತದ್ವಿರುದ್ಧವಾಗಿ ಆಂಟಿ ಕ್ಲಾಕ್‌ವೈಸ್ ತಿರುಗುವಿಕೆ ಭಾಸವಾಗುತ್ತೆ' ಅಂತ ವಿವರಿಸಿದರು. ಈ ಪ್ರಯೋಗಾನ ಬೇಕಾದರೆ ನೀವೂ ಸಹಾ ಕಂಪ್ಯೂಟರಿನಲ್ಲಿ ಮಾಡಿ ನೋಡ ಬಹುದು. ನೀವು ಬಲ ಮಿದುಳಿನವರೋ, ಎಡ ಮಿದುಳಿನವರೋ ಅಥವಾ ಮಿದುಳೇ ನಾಸ್ತಿ ವರ್ಗದವರೋ ಅಂತ ಗೊತ್ತಾಗುತ್ತೆ. ಆ ಕ್ಲಿಪ್ಪಿನ ಹೆಸರು ಇಂತಿದೆ. The Right Brain vs Left Brain test - Optical Illusion. ಯೂಟ್ಯೂಬಿನ ಸರ್ಚ್ ವಿಂಡೋದಲ್ಲಿ ಇದನ್ನು ಎಂಟರ್ ಮಾಡಿದರೆ ಕ್ಲಿಪ್ ಸಿಗುತ್ತದೆ.

ಅಂತೂ ನಮ್ಮ ಕೆಲಸವೆಲ್ಲಾ ಮುಗಿದ ನಂತರ ಸಯ್ಯಾಜಿ ರಾವ್ ರಸ್ತೆಯ ದೇವರಾಜಾ ಮಾರುಕಟ್ಟೆಯ ಆಸುಪಾಸಿನಲ್ಲಿ ಖಾರ ಹಾಕಿದ ಮಂಡಕ್ಕಿ ಪುರಿ ಅಂಗಡಿ ಹುಡುಕಿದೆವು. ಯಾವ ಅಂಗಡಿಯೂ ಕಣ್ಣಿಗೆ ಬೀಳಲಿಲ್ಲ. ಬೆಂಗಳೂರಿನಲ್ಲಿ ಹಾದಿಗೊಂದು, ಬೀದಿಗೊಂದು ಕಾಂಡಿಮೆಂಟ್ ಸ್ಟೋರುಗಳು ಇರುತ್ವೆ. ಇಲ್ಲಿ ನೋಡಿದ್ರೆ... ಅಂತ ಗೋಪಾಲ್ ಗೊಣಗಿದ್ದು ಕಿವಿಗೆ ಬಿತ್ತು. ಹಿಂತಿರುಗುವ ದಾರಿಯಲ್ಲಿ ಶ್ರೀರಂಗಪಟ್ಟಣದ ಬಳಿ ಸೇರುವ ಹೊತ್ತಿಗೆ ಬಲು ಜೋರು ಮಳೆ. ಗೋಸಾಯಿ ಘಾಟನ್ನು ಕರಿಘಟ್ಟದ ಪಟ್ಟಿಗೆ ಸೇರಿಸಿ ನಮ್ಮ ಪಯಣವನ್ನು ಮುಂದುವರಿಸಿದೆವು ಅನ್ನಿ.

**ಶಿವಕುಮಾರ್**

# ಕಸಬ್‌ನ ಕಳಕಳಿ

- ಇ.ಆರ್. ರಾಮಚಂದ್ರನ್

ಪ್ರೀತಿಯ ದಾವೂದ್ ಭಾಯ್,

ಸಲಾಂ ವಾಲೈಕುಂ!

ನಿಮ್ಮನ್ನು ಹೇಗೆ ಕರೆಯಬೇಕೆಂದು ನನಗೆ ಸರಿಯಾಗಿ ಗೊತ್ತಿಲ್ಲ.. ಮಾಫ್ ಕರ್ನ ಭಾಯ್! ನಾನು ನಿಮಗಿಂತ ಬಹುತ್ ಜೂನಿಯರ್ ಮತ್ತು ಮಾರಾಮಾರೀಲಿ ಕಮ್ ಎಕ್ಸ್ಪೀರಿಯೆನ್ಸವನು.

ಮೈ ಇಧರ್ ಆಕೆ 3 ವರ್ಷ ಆಗ್ತಾ ಬಂತು. ಬಂದಾಗ ಮೊದಮೊದಲು ಬಹಳ ಹೆದರಿಕೆ ಆಗ್ತಾ ಇತ್ತು. ಅಬ್ ನಹಿ. ಇಲ್ಲಿ ಹವ, ಜನ ಎಲ್ಲ ಚೆನ್ನಾಗಿ ಒಗ್ಗಿಹೋಗಿದ್ದಾರೆ ನನಗೆ. ಹಿಂದೂಸ್ಥಾನ್ ಅಚ್ಚ ಹೈ.

ಕೊನೆಗೂ ನಮ್ಮ ಒಸಾಮಾ ಭಾಯ್‌ಜಾನ್ ಪಾಕಿಸ್ಥಾನ್ನಲ್ಲೇ ಇದ್ರು! ಎಲ್ಲಾ ಬಿಟ್ಟು ಪಾಕಿಸ್ಥಾನದಲ್ಲಿ ಯಾಕೆ ಸೆಟಲ್ ಆಗಿದ್ರೂ ಭಾಯ್? ಅಲ್ಲಿ ಯಾರಾದ್ರೂ ಇನ್ಸಾನ್ ಇರೋ ಜಾಗಾನಾ ಅದು? ನಾರಾಝ್ ಆಗ್ಬೇಡಿ ಹಾಗೆ ಹೇಳ್ದೇ ಅಂತ.

ನಮ್ಮ ಇಮ್ರಾನ್ ಖಾನ್‌ನ ನೋಡಿ. ಕಿರ್ಕೆಟ್, ಕಿರ್ಕೆಟ್ ಅಂತ ಹೇಳಿ ಮೂರು ಮೂರು ದಿನಕ್ಕೆ ಇಲ್ಲಿಗೆ ಓಡಿಬರ್ತಾನೆ! ವಸೀಂ ಅಕ್ರಮ್ ಅಂತೂ ಐಪಿಲ್ ನೆಪ ಹೇಳಿ ಕೊಲ್ಕೊತಾದಲ್ಲಿ ಪರ್ಮನೆಂಟಾಗಿ ಟೆಂಟ್ ಹಾಕಿ ಮೀಠಾ ಪಾನ್ ಜೊತೆ ಕಡಕ್ ಚಾಯ್ ಕುಡೀತ ಅಚ್ಚ ಬೆಂಗಾಲಿ ಮಾತಾಡ್ಕೊಂಡು ಓಡಾಡ್ತಿದಾನೆ. ಜನಾಬ್ ಮುಷರಫ್ ಕೂಡಾ ಹೆದರ್ಕೊಂಡು ಲಂಡನ್ಗೆ ಓಡೋಗಿದಾರೆ!

ಒಸಾಮಾ ಹತ್ತು ವರ್ಷ ಮಿಲಿಟರಿ ಅಕಾಡಮಿಯ ಮಧ್ಯದಲ್ಲಿ ಆಫೀಸರ್ 'ಡಮ್ಮಿ'ಗಳ ಮಧ್ಯ ಇದ್ದದ್ದಕ್ಕೆ ಸರಿಹೋಯಿತು! ಇಲ್ಲದಿದ್ದರೆ ಅಲ್ಲಿ ಓಡಾಡುವ ಸ್ಕೂಲ್ ಮಕ್ಕಳು ಅವರನ್ನು ಯಾವಾಗಲೋ ಗುರ್ತಿಸಿ ಹಿಡಿದು ಕೊಟ್ಟಿರ್ತಾ ಇದ್ರು...!

ನನಗೆ ಇಲ್ಲಿ ಬಂದಾಗ ಮೊದಮೊದಲು ಯಾವತ್ತು ಗಲ್ಲಿಗೆ ಹಾಕ್ತಾರೋ ಅಂತ ಬಹಳ ಹೆದರಿಕೆ ಆಗಿತ್ತು, ಭಾಯ್! ಆಮೇಲೆ ಗೊತ್ತಾಯಿತು, ಇಧರ್ ಗಲ್ ಇಲ್ವೇ ಇಲ್ಲ, ಮುಚ್ಚಿಬಿಟ್ಟಿದ್ದಾರೆ ಅಂತ! ಗಲ್ಲಿಗೆ ಏರಿಸುವವನನ್ನು 'ಆಫೀಸ್ ಡೆಸ್ಕ್' ಜಾಬ್‌ಗೆ ಹಾಕಿದ್ದಾರಂತೆ! ಧಂದ ಮರ್ತೋಗುತ್ತೆ ಅಂತ ಅವನು ಸೂರಿಗೆ ಹಗ್ಗ ಕಟ್ಟಿ ಆಗಾಗ ಏಳಿತಾ ಕೆಲಸ ಮಾಡ್ತಾನಂತೆ!

ಇಲ್ಲಿಯ ಲಾಯರ್ಗಳಿಗೆ, ಜಡ್ಜ್‌ಗಳಿಗೆ ವಾದ-ವಿವಾದ ಅಂದ್ರೆ ಬಹಳ ಇಷ್ಟ. ವರ್ಷಗಳು ಒಂದೇ ಕೇಸನ್ನು ಮತ್ತೆಮತ್ತೆ ಸುತ್ತಿ ಸುತ್ತಿ ವಾದ ಮಾಡುತ್ತಲೇ ಇರುತ್ತಾರೆ.

ಇಲ್ಲಿ ಟೆರರಿಸ್ಟ್‌ಗಳನ್ನು ಟೂರಿಸ್ಟ್ ತರಾ ಚೆನ್ನಾಗಿ ನೋಡ್ಕೋಳ್ತಾರೆ. ನಾನು ಕೇಳಿದ ಊಟ - ಪಂಜಾಬಿ, ಚೈನೀಸ್, ಪುಲ್ಬಾರ್ - ಎಲ್ಲಾ ತರಿಸ್ಕೊಡ್ತಾರೆ. ನನ್ನ ರೂಮಿಗೆ ಸಮ್ಮರ್ ಬಿಸಿಲಿಗೆ ಏ.ಸಿ. ಹಾಕಿದಾರೆ. ಐಫೋನ್ ತರಿಸ್ಕೊಂಡಿದೀನಿ. ಎಕ್ಸ್ಟ್ರಾ ಪೈಸಾ ತೊಗೊಂಡು ಎಲ್ಲಾ ಕೊಡ್ತಾರೆ ಜೈಲ್ನಲ್ಲಿ, ಬಹಳ ಒಳ್ಳೆಯವ್ರು ಎಲ್ಲಾ!



ಹಿಂದೂಸ್ಥಾನದಲ್ಲಿ ಏಕ್ ಬಾತ್ ಹೈ..... ಸುಮಾರು ಮಿನಿಸ್ಟರ್ಗಳಿಗೆ ದೇವರೆಂದರೆ ಬಹಳ ಭಯ, ಭಕ್ತಿ, ಭಾಯ್! ಆದರೆ ಅವರೇ ಸಿಕ್ಕಾಪಟ್ಟೆ ದುಡ್ಡು ಹೊಡಿಯೋದು! ದಿನಾ ಒಂದಲ್ಲ ಒಂದು ಹಗರಣ ಸ್ಕ್ಯಾಮ್... ಟೆಲಿಫೋನ್ ಹಗರಣ, ಕಾಮನ್ವೆಲ್ತ್ ಹಗರಣದಲ್ಲಿ ಸಿಕ್ಕಿ ಹಾಕಿಕೊಂಡವರಲ್ಲಿ ಮಿನಿಸ್ಟರ್ಗಳು, ಉದ್ಯೋಗಪತಿಗಳು, ಪುಢಾರಿಗಳು ಎಲ್ಲಾ ಶಾಮೀಲಾಗಿದ್ದಾರೆ. ಅವರೆಲ್ಲರೂ ಜೇಬುಗಳ್ಳರು, ಕೇಡಿಗಳು, ಕುಡಿದು ಗಲಭೆ ಎಬ್ಬಿಸುವವರ ರೂಮ್ ಮೇಟ್ಸ್. ಒಬ್ಬರಿಗೊಬ್ಬರು ಪಾಠ ಹೇಳಿಕೊಡ್ತಾ ಇದಾರೆ – ಜೈಲಲ್ಲಿ.

ನಾನು ಸ್ಟಾರ್ ಖೈದಿ! ನನ್ಗೆ ಇಸ್ಪೆಷಲಾಗಿ ಟೀವಿ ಕೊಟ್ಟಿದಾರೆ. ನಾನು ಮುಂಬೈಲಿ ಬಂದು ಇಳಿದಾಗಿನಿಂದ ಈ ಲಕ್ಷುರಿ ರೂಮಿಗೆ ಬರುವ ತನಕ ಮಾಡಿದ್ದ ಶೂಟಿಂಗ್ ದಿನಾ ಟೀವಿಲಿ ತೋರಿಸ್ತಾರೆ! ಶಾರು ಖಾನ್ ಕೂಡ ಟೀವಿಮೆ ಇತ್ನ ನಹೀ ಆತೆ!

ಮೊನ್ನೆ ಒಂದು ತಮಾಷೆ ಆಯ್ತು ಭಾಯ್ಜಾನ್! ನನ್ಗೆ ನಮ್ಮೂರ್ ಫರೀದ್ಕೋಟ್ದು ಖೀಮ, ಪಾಯ ತರಿಸ್ಕೊಡಿ, ಇಲ್ದಿದ್ರೆ ಊಟ ಮಾಡಾಕಿಲ್ಲ ಅಂತ ಕೂತ್ಬಿಟ್ಟೆ ಸುಮಾರು ಮಧ್ಯಾಹ್ನ ಆದ್ರೂ ಊಟ ಬರ್ಲಿಲ್ಲ.. ಬಹುತ್ ಬೂಖ್ ಲಗ್ರಹಾಥ... 2 ಗಂಟೇಗ್ ಬಿಸಿ ಬಿಸಿ ಖೀಮ, ಪಾಯ ಬಂತು... ಯಾರೋ ಮಿನಿಸ್ಟ್ರ ಪ್ಲೇನ್ಮೆ ಜಾಕೆ ಲೇಕೆ ಆಯ!

ಇಲ್ಲಿ ಯಾರನ್ನು ಬೇಕಾದರೂ ಬೆಲೆಗೆ ಖರೀದ್ ಕರ್ ಸಕ್ತಾ. ಪಾಕಿಸ್ತಾನ್ 'ಚಾಚ' ಕೊಟ್ಟಿದ್ದ ಹಣ ಜೈಲ್ ವಾರ್ಡರ್ಗೆ ಸಾಲ ಕೊಟ್ಟಿದ್ದೀನಿ. ನಾನು ದುಡ್ಡು ಕೊಟ್ಟು ಬಿಡಿಸಿಕೊಂಡು ಬಾಹರ್ ಆ ಸಕ್ತಾ. ಆದ್ರೆ ಯಾಕೆ? ಇಧರ್ ಫೈ- ಸ್ಟಾರ್ ಲೈಫ್ ಹೈ ಮೇರಾ!

ದಾವೂದ್ ಬಾಯ್! ನೀವು ಪಾಕಿಸ್ಥಾನಕ್ಕೆ ಓಡಿಹೋಗಿ ಕರೀಬನ್ ಇಪ್ಪತ್ತು ವರ್ಷ ಆಗ್ತಾ ಬಂತು. ಅಲ್ಲಿ ಯಾಕೆ ಇದ್ದೀರಿ ಇನ್ನೂ? ಜನಾಬ್ ಜರ್ದಾರಿ, ಗಿಲಾನಿ ಸಾಬ್ಗಳೇ ಅಮೇರಿಕಾ, ಇಂಗ್ಲೆಂಡ್ ಅಂತ ಪಾಕಿಸ್ಥಾನದ ಹೊರಗಡೇನೇ ಇರ್ತಾರೆ. ನಿಮ್ಮನ್ನು ಡ್ರೋನ್ ಮಿಸ್ಸೈಲ್ನಲ್ಲಿ ಅಮೇರಿಕಾ ಹೊಡೆದು ಹಾಕುತ್ತಾರೆ ಏಕ್ ನ ಏಕ್ ದಿನ್. ಅದು ಬಿದ್ದರೆ ಇನ್ಸಾನ್ ಆವಿಯಾಗಿ

ಹೊಗೆಯಾಗ್ಬಿಡ್ತಾನಂತೆ! ಮೈ ಜುಂ ಅನ್ನುತ್ತೆ ಕೇಳಿದರೇನೆ! ಮೊನ್ನೆ ನಮ್ಮ ಕಷ್ಮೀರಿಗೆ ಡ್ರೋನ್ನಲ್ಲಿ ಹೊಡೆದ್ರು.

ನೀವು ಇಲ್ಲಿಗೆ ಬಂದು ಪೊಲೀಸ್ಗೆ ಸರೆಂಡರ್ ಆಗ್ಬಿಟ್ಟು ಆರಾಮವಾಗಿ ಇರ್ಬೋದು. ನಿಮಗೆ ನನ್ನ ಪಕ್ಕದ ರೂಮಿನಲ್ಲಿ ಹಾಕೋದಕ್ಕೆ ನಾನು ಗ್ಯಾರಂಟೀ ಕೊಡ್ತೀನಿ. ನಿಮಗೆ ಇಲ್ಲಿ ಏನು ಕಡಿಮೆ.... ನಿಮ್ಮದೇ ಮಕಾನ್, ಗಾಡಿ, ಬಂಗ್ಲ, ಕುಚ್ ಬೀಬಿಯಾ..... ಸಬ್ ಹೈ. ಇಲ್ಲಿ ರಾಜನ ಹಾಗೆ ನೋಡ್ಕೊಳ್ತಾರೆ... ಬೀಬಿಯರನ್ನು ಕೂಡ ಒಬ್ಬರಾದಮೇಲೆ ಒಬ್ಬರನ್ನು ಬಿಟ್ಟು ಅವರೇ ಕರ್ಕೊಂಡು ಹೋಗಿ ಬಿಡ್ತಾರೆ!

ಬಾಲೀವುಡ್ ಫಿಲ್ಲಮ್ ಸ್ಟಾರ್ ಜೊತೆ ಸೇರಿ ನಿಮ್ಮದೇ ಒಂದು ಐಪಿಎಲ್ ಟೀಮ್ ಕಟ್ರೀನಾ ಕೈಫ್ ಅಥವ ಪ್ರಿಯಾಂಕ ಚೋಪ್ರ ಜೊತೆ ಕರ್ಸಕ್ತಾ ಆಪ್. ನಿಮ್ಮ ಕರಿ, ಕೆಂಪು ಡ್ರಗ್ಸ್ ಹಣ ಹಾಕಿ ಟೀಮ್ ಶುರು ಮಾಡಬಹುದು. ಜರಾ ಸೋಚ್ನಾ ಭಾಯ್.

ಅಬ್ಬೆ! ಮೇರ ಖಾನ ಕ ಟೇಮ್ ಹೋಗಯ...

ಈ ಲೆಟರ್ ನಿಮಗೆ ತಲುಪಿಸುವುದಕ್ಕೆ ಮತ್ತೆ ನಿಮ್ಮಿಂದ ರಿಪ್ಲೈಗೆ ಏಕ್ ಟೀವಿ ರಿಪೋರ್ಟರ್‌ಕೊ ಐವತ್ತು ಸಾವಿರ ಕೊಟ್ಟಿದೀನಿ. ನಿಮ್ಮ ರಿಪ್ಲೈ ಹಾಗೇ ಕಳಿಸಿ. ಅದು ನನಗೆ ತಲಪುತ್ತೆ.

ಖುದಾ ಹಫೀಜ್, ಭಾಯ್!

ಕಸಬ್ ಅಜ್ಮಲ್

✵

---

## ರಿಲೊಕೇಷನ್

ಶವ ಪೆಟ್ಟಿಗೆ ತಯಾರಿಸಿ ಮಾರುವ ವ್ಯಕ್ತಿಯೊಬ್ಬ ಒಂದು ಶವ ಪೆಟ್ಟಿಗೆ ಯಾರಿಗೋ ಕೊಡಲು ಕಾರಿನಲ್ಲಿ ಕೊಂಡೊಯ್ಯುತ್ತಿದ್ದಾಗ ಅದು ಕೆಟ್ಟು ನಿಂತಿತು. ತಡವಾಗಬಾರದೆಂದು ಅವನೇ ಅದನ್ನು ತಲೆಯ ಮೇಲೆ ಹೊತ್ತುಕೊಂಡು ಡೆಲಿವೆರಿ ಮಾಡಲು ಹೊರಟ.

ಪೊಲೀಸಿನವರು ಅವನನ್ನು ನೋಡಿದರು.

“ಏ! ಎಲ್ಲಿ ಹೊರಟೆ. ಏನು ತೊಗೊಂಡು ಹೋಗ್ತಾ ಇದ್ದೀಯಾ?” ಎಂದು ಜಬರಿಸಿ ಕೇಳಿದರು.

“ನನ್ನನ್ನು ಹೂತಿದ್ದ ಜಾಗ ಸರಿ ಇಲ್ಲ. ಅದಕ್ಕೆ ಬೇರೆ ಜಾಗ ಹುಡುಕಿಕೊಂಡು ಹೋಗ್ತಾ ಇದ್ದೀನಿ” ಎಂದಾಗ ಪೊಲೀಸರು ತಬ್ಬಿಬ್ಬಾದರು.

# ಗೋವಿನ ಹಾಡು;
# ಒಂದು ಗಂಭೀರ ಚಿಂತನೆ

**- ಆನಂದ**

**ಚಿ**ರಪರಿಚಿತ 'ಗೋವಿನ ಹಾಡು' ಪದ್ಯ 'ಕರ್ನಾಟಕ ದೇಶದಲ್ಲಿ ಕಾಳಿಂಗ ಎಂಬ ಗೊಲ್ಲನಿದ್ದನು' ಎಂದು ಶುರುವಾಗುತ್ತದೆ. ಆದರೆ ಯಾವ ಹಳ್ಳಿ ಎಂದು ಎಲ್ಲೂ ಹೇಳಿಲ್ಲ. ಏಕೆ? ಕಾಳಿಂಗ 'ದಿನ ನಿತ್ಯ ಬೆಳಿಗ್ಗೆ ನದಿಯಲ್ಲಿ ಮಿಂದು ಹಣೆಗೆ ತಿಲಕವನಿಟ್ಟು ಎಳೆಯ ಮಾವಿನ ಮರದ ಕೆಳಗೆ ಕೊಳಲನೂದುತ ಕೂತು ಕರುಗಳನ್ನು ಹೆಸರು ಹಿಡಿದು ಪ್ರೇಮದಿಂದ ಕರೆಯುವನು' ಎಂದು ಪದ್ಯ ಹೇಳುತ್ತದೆ. ಆದರೆ ಈ ಹಸುಗಳು ಯಾರದ್ದು? ಕಾಳಿಂಗನೆ ಇವುಗಳ ಒಡೆಯನೆ? ಪ್ರತಿ ನಿತ್ಯ ಕಾಳಿಂಗ ಮಾವಿನ ಮರದ ಕೆಳಗೇ ಕೂಡುವನೆ? ಬೇರೆ ಮರಗಳು ಇವನಿಗೆ ಇಷ್ಟವಿರಲಿಲ್ಲವೆ? ಏಕೆ? ಈ ಬಗ್ಗೆ ಏನೂ ಮಾಹಿತಿ ಇಲ್ಲ.

'ಗಂಗೆ ಬಾರೆ, ಗೌರಿ ಬಾರೆ, ತುಂಗಭದ್ರೆ ನೀನು ಬಾರೆ ಪುಣ್ಯಕೋಟಿ ನೀನು ಬಾರೆ, ಪುಣ್ಯವಾಹಿನಿ ನೀನು ಬಾರೆ...' ಎಂದು ಕರೆದರೆ ಎಲ್ಲ ಪಶುಗಳು ಬಂದು ನಿಲ್ಲುತ್ತಿದ್ದವು ಎಂದು ಹೇಳುವಾಗ ಈ ಹಸುಗಳಿಗೆ ಯಾರು ಈ ಹೆಸರುಗಳನ್ನಿಟ್ಟರು ಎಂಬ ಪ್ರಶ್ನೆ ಉದ್ಭವಿಸುವುದಿಲ್ಲವೆ? ಈ ಎಲ್ಲ ಹಸುಗಳು ಕರೆದ ಹಾಲಿನಿಂದ ಬಿಂದಿಗೆ ತುಂಬುತ್ತಿತ್ತು ಎಂದಾಗ ಈ ಹಾಲು ಯಾರಿಗೆ ಎಂಬ ಸಂದೇಹ ಸಂದೇಹವಾಗಿಯೇ ಉಳಿಯುತ್ತದೆ.

ಇಷ್ಟಾದ ಮೇಲೆ ಕಾಳಿಂಗನ ಪ್ರಸ್ತಾಪವೇ ಇಲ್ಲ. ಏಕೆ? ಹೀರೋನಂತೆ ಆರಂಭದಲ್ಲಿ ಮಿಂಚುವ ಕಾಳಿಂಗ ನಂತರ ಏನಾದ? ಅವನನ್ನು ಕೈ ಬಿಟ್ಟಿದ್ದೇಕೆ?

ನಂತರ ಹಸುಗಳು ಮೇಯಲು ಅರಣ್ಯಕ್ಕೆ ತೆರಳುತ್ತಿದ್ದವು ಎಂದು ಮುಂದೆ ಸಾಗುವ ಪದ್ಯ 'ಹಬ್ಬಿದಾ ಮಲೆಮಧ್ಯದೊಳಗೆ ಅರ್ಭುತಾ ಎಂಬ ವ್ಯಾಘ್ರವೊಂದು ವಾಸಿಸುತ್ತಿತ್ತು' ಎನ್ನುವಾಗ ಅಂತಹ ಪರಿಸ್ಥಿತಿಯಲ್ಲಿ ಗೋವುಗಳನ್ನು ಕಾಡಿನೊಳಗೆ ಬಿಡಬೇಕೆ ಎನ್ನುವ ಪ್ರಶ್ನೆಯೂ ಉದ್ಭವಿಸುತ್ತದೆ. ಏಕೆಂದರೆ, ಒಂದು ದಿನ ಸರಿಯಾದ ಆಹಾರ ಸಿಗದೆ ಅರ್ಭುತಾ ಅಂದ ಹಾಗೆ ಇದಕ್ಕೆ ಈ ಹೆಸರು ಯಾರು ಕೊಟ್ಟರು? - ಹಸಿವಿನಿಂದ ಬಳಲಿ ನಡೆದಾಡುತ್ತಿತ್ತು ಎಂದಾಗ ಅರಣ್ಯ ಸಂರಕ್ಷಣೆ ಸರಿಯಾಗಿ ಆಗಿಲ್ಲ ಎಂಬ ಭಾವನೆ ಬಾರದೆ? ಅರಣ್ಯ ಸಂರಕ್ಷಣೆ ಸರಿಯಾಗಿ ಆಗಿದ್ದರೆ ಹುಲಿ ಹಸುವಿನ ಮೇಲೆ ಹಾರುವ ಬದಲು ಜಿಂಕೆ ಮುಂತಾದವುಗಳನ್ನು ತಿಂದು ಹಸಿವನ್ನು ತೀರಿಸಿಕೊಳ್ಳುತ್ತಿದ್ದವು. ಅಲ್ಲವೆ?

ಹೀಗೆ, ಕಾಳಿಂಗ ತನ್ನ ಬೇಜವಾಬ್ದಾರಿಯಿಂದ ಗೋಗಳನ್ನು ಗೋ ಗೋ ಎನ್ನುತ್ತಾ ಕಾಡಿಗೆ ಅಟ್ಟಿದ್ದರಿಂದ ಪುಣ್ಯಕೋಟಿ ಎಂಬ ಹಸು ಸಿಕ್ಕಿಬೀಳುತ್ತದೆ. ಪುಣ್ಯಕೋಟಿ ಮಾತ್ರ ಓಡಿ ಹೋಗದಿರಲು ಕಾರಣಗಳೇನು? ಪುಣ್ಯಕೋಟಿಯನ್ನು ಅಡ್ಡಕಟ್ಟಿದ ದುಷ್ಟ ವ್ಯಾಘ್ರ 'ಇಂದು ಎನಗಾಹಾರ ಸಂದಿತು' ಎಂದುಕೊಂಡು 'ನಿನ್ನ ಸೀಳಿ ಬಿಸುಡುವೆ ನಾನು' ಎಂದು ಹುಲಿ

ಘರ್ಜಿಸುತ್ತದೆ ಎಂದು ಪದ್ಯ ಹೇಳುತ್ತದೆ. ಹುಲಿಗೆ ನಿಜವಾಗಿಯೂ ಹಸಿವೆಯಾಗಿದ್ದರೆ ಅದು ಚಂಗನೆ ಪುಣ್ಯಕೋಟಿಯ ಮೇಲೆ ಹಾರಬೇಕಿತ್ತು ಅಲ್ಲವೆ? ಹೀಗೇಕೆ ಆಗಲಿಲ್ಲ?

ಈ ಸದಾವಕಾಶ ಬಳಸಿಕೊಂಡ ಪುಣ್ಯಕೋಟಿ 'ಒಂದು ಬಿನ್ನಪ ಹುಲಿರಾಯ ಕೇಳು' ಎಂದು ಮೊರೆಯಿಟ್ಟು 'ಕಂದನಿರುವನು ದೊಡ್ಡಿಯೊಳಗೆ ಒಂದು ನಿಮಿಷದಿ ಮೊಲೆಯ ಕೊಟ್ಟು ಬಂದು ಸೇರುವನಿಲ್ಲಿಗೆ' ಎಂದು ಹೇಳುತ್ತದೆ. ಅಂದರೆ, ಹಸು ಬೆಳಿಗ್ಗೆ ಹಾಲೂಡಿಸದೆ ಬಂದಿದೆ ಎಂದಾಯಿತು. ಕಾಳಿಂಗ ಎಲ್ಲ ಹಾಲನ್ನು ಕರೆದು ಹಸುಗಳ ಶೋಷಣೆ ಮಾಡುತ್ತಿದ್ದ ಎಂದು ಅರ್ಥೈಸಬಹುದು.

ಈಗಲೂ ಸಹ ಹಸಿದ ಹುಲಿ ಹಸುವಿನ ಮೇಲೆ ಹಾರುವುದಿಲ್ಲ. ಬಾಬಾ ರಾಮದೇವ್ ಜತೆ ಮಂತ್ರಿಗಳು ಸಂಭಾಷಣೆಯಲ್ಲಿ ತೊಡಗಿದಂತೆ ಹಸುವಿನ ಜತೆ ಮಾತುಕತೆ ನಡೆಸುತ್ತದೆ. 'ಹಸಿದ ವೇಳೆಗೆ ಸಿಕ್ಕಿದೊಡವೆಯ ವಶವ ಮಾಡದೆ ಬಿಡಲು ಈಗ ನುಸುಳಿ ಹೋದರೆ ಮತ್ತೆ ಬರುವೆಯಾ?' ಎಂದು ಕೇಳುವ ವ್ಯಾಘ್ರ ತನಗೆ ಹಸಿವೆ ಇದೆ ಎಂದು ನೆನಪಿಸುತ್ತದೆ. ಆದರೆ ಸ್ಟಿಲ್ ನೊ ಅಟ್ಯಾಕ್! ವೈ?

ಹಸುವಿಗೆ ಮಾತನಾಡಲು ಇನ್ನೊಂದು ಅವಕಾಶ ಸಿಗುತ್ತದೆ. 'ಮೂರು ಮೂರ್ತಿ, ಸೂರ್ಯ ಚಂದ್ರ ಮತ್ತು ಧಾರುಣಿ ದೇವಿಗಳಾಣೆ ಬಂದೇ ಬರುವೆನು' ಎಂದು ಭಾಷೆ ಕೊಡುತ್ತದೆ. ಆಶ್ಚರ್ಯವೆಂದರೆ ಇದನ್ನು ಹುಲಿ ಒಪ್ಪುವುದು.

ಅಲ್ಲಿಂದ ಹೊರಟ ಪುಣ್ಯಕೋಟಿ ಬೇಗ ಬೇಗನೆ ದೊಡ್ಡಿಗೆ ಬಂದು ತನ್ನ ಕರುವಿಗೆ ಮೊಲೆಯೂಡಿಸಿ ತಾನು ಸಿಕ್ಕಿಕೊಂಡಿರುವ ಸಂಕಷ್ಟವನ್ನು ವಿವರಿಸಿ 'ನಿನ್ನ ನೋಡಿ ಹೋಗಲು ಬಂದೆ ಕಂದ' ಎಂದು ಹೇಳುತ್ತದೆ. ನಂತರ 'ಕಟ್ಟಕಡೆಯಲಿ ಮೇಯ ಬೇಡ, ಬೆಟ್ಟದೊತ್ತಿಗೆ ಹೋಗಬೇಡ ದುಷ್ಟವ್ಯಾಘ್ರಗಳುಂಟು ಅಲ್ಲಿ' ಎಂಬ ಹಿತವಚನ ಬೇರೆ. ಆದರೆ ಈ ಹಿತವಚನವನ್ನು ತಾನೇ ಪಾಲಿಸಿದ್ದರೆ ಈ ಸಂಕಷ್ಟ ಒದಗಿ ಬರುತ್ತಲೇ ಇರಲಿಲ್ಲ!

'ಅಮ್ಮ ನೀನು ಸಾಯಲೇಕೆ ನಮ್ಮ ಬಿಟ್ಟು ಹೋಗಲೇಕೆ?' ಎಂದು ಸಹಜವಾಗಿ ಕರು ಪ್ರಲಾಪಿಸಿದಾಗ 'ಕೊಟ್ಟ ಭಾಷೆಗೆ ತಪ್ಪಲಾರೆನು, ಕೆಟ್ಟ ಯೋಚನೆ ಮಾಡಲಾರೆನು ನಿಷ್ಠೆಯಿಂದಲಿ ಪೋಪನಲ್ಲಿಗೆ ಕಟ್ಟಕಡೆಗಿದು ಖಂಡಿತ' ಎಂದು ತನ್ನ ಧೃಡ ನಿರ್ಧಾರವನ್ನು ಪ್ರಕಟಿಸುತ್ತದೆ. ಆಗ ಕರು ಇತರರ ಹಾಗೆ ಪ್ರಾಕ್ಟಿಕಲ್ ಆಗಿ ಯೋಚಿಸಿ 'ಅಮ್ಮ ನೀನು ಹೋಗಲೇಕೆ? ಸುಮ್ಮನಿರು ಎಲ್ಲರ ಹಾಗೆ' ಎಂದು ತಾಯಿಗೆ ಸಹಜವಾಗಿಯೇ ಹೇಳುತ್ತದೆ. ಆದರೆ ಪುಣ್ಯಕೋಟಿಯದು ಹೋಪ್‌ಲೆಸ್ ಕೇಸ್. ಆದುದರಿಂದ 'ಸತ್ಯವೇ ನಮ್ಮ ತಾಯಿ ತಂದೆ ಸತ್ಯವೇ ನಮ್ಮ ಬಂಧು ಬಳಗ. ಸತ್ಯ ವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಜಗದೀಶನು' ಎಂದು ಕರುವಿನ ಬಾಯಿ ಮುಚ್ಚಿಸುತ್ತದೆ.

ಆದರೆ ಕರುವಿಗೆ ಈಗ ಸಮಸ್ಯೆಯ ಸರಮಾಲೆಯೇ ಕಾಣತೊಡಗುತ್ತದೆ. 'ಆರ ಮೊಲೆಯ ಕುಡಿಯಲಮ್ಮ? ಆರ ಸೇರಿ ಬದುಕಲಮ್ಮ? ಆರ ಬಳಿಯಲಿ ಮಲಗಲಮ್ಮ ಆರು ನನಗೆ ಹಿತವರು?' ಎಂದು ಸೀರಿಯಲ್ ಪ್ರಶ್ನೆಗಳನ್ನು ಕೇಳತೊಡಗುತ್ತದೆ.



ತುಸು ವಿಚಲಿತಗೊಂಡ ಪುಣ್ಯಕೋಟಿ ಈಗ ಐಟಿ ಕ್ಷೇತ್ರದ ಮಾದರಿಯಲ್ಲಿ ಪರಿಹಾರವನ್ನು ಔಟ್‌ಸೋರ್ಸ್ ಮಾಡಲು ನಿರ್ಧರಿಸಿ ಈಗಾಗಲೇ ದೊಡ್ಡಿಗೆ ಓಡಿ ಬಂದಿದ್ದ ಇತರ ಹಸುಗಳಿಗೆ 'ಅಮ್ಮಗಳಿರಾ, ಅಕ್ಕಗಳಿರಾ, ನಿಮ್ಮ ಕಂದಾನೆಂದು ಕಾಣಿರಿ ತಬ್ಬಲಿಯ ಈ ಕರುವನು' ಎಂದು ಕೇಳಿಕೊಳ್ಳುತ್ತದೆ. ಆನ್ ಹ್ಯುಮಾಟೇರಿಯನ್ ಗ್ರೌಂಡ್ಸ್ ಅವುಗಳು ಒಪ್ಪುತ್ತವೆ.

ಪರಿಹಾರ ಸಿಕ್ಕಿದ ಮೇಲೆ ಇನ್ನೇಕೆ ತಡ ಎಂದು ಪುಣ್ಯಕೋಟಿ ಮಗನನ್ನು ಅಗಲುತ್ತಾ 'ತಬ್ಬಲಿಯು ನೀನಾದೆ ಮಗನೆ, ನಮ್ಮಿಬ್ಬರ ಋಣ ತೀರಿತಿಂದು' ಎಂದು ಮಗುವನ್ನು ಅಗಲಿ ಹೊರಡುವ ಆತುರ ನೋಡಿದರೆ ಅದಕ್ಕೆ ಈ ಜೀವನ ಸಾಕಾಗಿತ್ತು ಎಂದೆನಿಸದೇ ಇರಲಾರದು.

ಬೇಗ ಬೇಗನೆ ಹುಲಿಯ ಬಳಿ ಸಾಗಿ ಅದರ ಮುಂದೆ ಬಂದು ನಿಂತಿತು' ಎಂಬ ಸಾಲುಗಳು ಈ ನಿಟ್ಟಿನಲ್ಲಿ ಅರ್ಥಗರ್ಭಿತವಾಗುತ್ತವೆ. ಆದರೆ ಮಾರ್ಗ ಮಧ್ಯದಲ್ಲಿ ನದಿಯಲ್ಲಿ ಏಕೆ ಸ್ನಾನ ಮಾಡಿತು ಎಂಬುದು ಅರ್ಥವಾಗುವುದಿಲ್ಲ.

ಹುಲಿಯ ಮುಂದೆ ನಿಂತ ಪುಣ್ಯಕೋಟಿ ಸುಮ್ಮನಿರುವುದಿಲ್ಲ. ಅದನ್ನು ಕೆಣಕುವ ಮಾದರಿಯಲ್ಲಿ 'ಖಂಡವಿದೆಕೋ ಮಾಂಸವಿದೆಕೋ, ಗುಂಡಿಗೆಯ ಬಿಸಿ ರಕ್ತವಿದೆಕೋ, ಚಂಡ ವ್ಯಾಘ್ರನೆ ನೀನಿದೆಲ್ಲವ ಉಂಡು ಸಂತಸದಿಂದಿರು' ಎಂದು ಮೆನು ಕಾರ್ಡ್ ತೋರಿಸುವಂತೆ ಹೇಳುತ್ತದೆ.

ಈಗ ಆಶ್ಚರ್ಯವಾಗುವುದು ನಮ್ಮ ಸರದಿ. ಏಕೆಂದರೆ ಪುಣ್ಯಕೋಟಿಯ ನೊ ಸ್ಟ್ರಿಂಗ್ಸ್ ಆಫರ್ ಕೇಳಿದ ಮೇಲೆ ಹುಲಿಯ ಬಾಯಿನಲ್ಲಿ ನೀರು ಅಥವಾ ಜೊಲ್ಲು ಬರುವುದಿಲ್ಲ. ಬದಲಿಗೆ 'ಇವಳನು ಕೊಂದು ತಿಂದರೆ ಮೆಚ್ಚನಾ ಪರಮಾತ್ಮನು' ಎಂದು ಕಣ್ಣೀರಿಡುತ್ತದೆ. ಹಸಿವೆ ಮುಚ್ಚಿಹೋಯಿತೆ?

ಈಗ ಒಂದು ತರಹ ಪರಕಾಯ ಪ್ರವೇಶವಾದಂತಾಗಿ 'ಎನ್ನ ಒಡಹುಟ್ಟಕ್ಕ ನೀನು ನಿನ್ನ ಕೊಂದು ಏನ ಪಡೆವೆನು?' ಎಂದು ಕಣ್ಣೀರಿಡುತ್ತದೆ. ಅಷ್ಟೇ ಆಗಿದ್ದರೆ ಸುಮ್ಮನಿರಬಹುದಿತ್ತು. ಆದರೆ ಹುಲಿ ಜಿಗಿದು ಪ್ರಾಣವನ್ನೇ ಕಳೆದುಕೊಂಡಿತು ಎಂದಿದೆ. ಅಂದರೆ ಈ ಹುಲಿಗೂ ಸಾಯುವ ತವಕವಾಗಿದ್ದು ಏನಾದರೂ ಒಂದು ಕಾರಣ ಹುಡುಕುತ್ತಿತ್ತೇ ಎಂಬ ಅನುಮಾನ ಕಾಡದೆ ಇರದು. ನನಗಂತೂ ಕಾಡಿದೆ. ಈಗ ನಿಮಗೆ?

**(ಈ ಕವನದ ಮೂಲ ಕರ್ತೃ ಯಾರೆಂದು ಗೊತ್ತಿಲ್ಲದೆ ಇರುವುದರಿಂದ ಈ ಗಂಭೀರ ಚಿಂತನೆಗೆ ಪ್ರಯತ್ನ ಮಾಡಲಾಗಿದೆ).**

✵

# ಪಿಳ್ಳೆ ಪಂಡಿತರ ಪಿತ್ತಪ್ರಕೋಪ...

**- ಎಚ್.ಎಸ್. ವೆಂಕಟೇಶ ಮೂರ್ತಿ**

**ಹು**ಡುಗನಾಗಿದ್ದಾಗ ನನಗೆ ಅಲರ್ಜಿಯ ತೊಂದರೆ ತುಂಬಾ ಇತ್ತು. ಆಗ ಅಲರ್ಜಿ ಎಂಬ ಪದವೇ ಚಾಲ್ತಿಯಲ್ಲಿರಲಿಲ್ಲ ಬಿಡಿ. ನಮ್ಮಜ್ಜಿ ನನಗೆ ಮೈತುಂಬ ದದ್ದು ಕಾಣಿಸಿಕೊಂಡರೆ ಅದು ಪಿತ್ತಪ್ರಕೋಪದ ಫಲ ಎನ್ನುತ್ತಿದ್ದರು. ಸಣ್ಣಗೆ ಮೊದಲು ಎಲ್ಲಾದರೂ ನವೆ ಕಾಣಿಸಿಕೊಳ್ಳೋದು. ನವೆ ತಡೆಯಲಾರದೆ ಸ್ವಲ್ಪ ನವೆ ಬಂದ ಜಾಗ ಕೆರೆದುಕೊಂಡೆನೋ ಬುರು ಬುರು ಅಂತ ಆ ಜಾಗ ಬೋಂಡದಂತೆ ಉಬ್ಬಿಕೊಳ್ಳೋದು. ಹಾಗೇ ಅದು ಭೂಪಟದ ಹಾಗೆ ಹರಡೋದು. ಇದು ಆಫ್ರಿಕಾ, ಇದು ಆಸ್ಟ್ರೇಲಿಯಾ, ಇದು ಅಮೆರಿಕಾ, ಇದು ಇಂಡಿಯಾ ಅನ್ನುವಂತೆ ಮೈತುಂಬಾ ನಾನಾ ಮ್ಯಾಪುಗಳು ಮೂಡಿ ಉಬ್ಬುಚಿತ್ರದ ಹಾಗೆ ಕಂಗೊಳಿಸುತ್ತಾ ಇದ್ದವು. ಮೈಯೆಲ್ಲಾ ಪರಪರ ಕೆರೆದುಕೊಳ್ಳುವಂತಾಗುತ್ತಿತ್ತು. ಕೆರೆದಷ್ಟೂ ನಸುಕೆಂಪಗಿನ ಉಬ್ಬುಶಿಲ್ಪಗಳು ಮೈತುಂಬಾ ಹರಡಿಕೊಳ್ಳುತ್ತಾ ಇದ್ದವು. ಆಗ ನಾನೇ ಒಂದು ಭೂಗೋಳವಾಗಿಬಿಡುತ್ತಾ ಇದ್ದೆ. ಆ ಗೋಳು ಹೇಳುವುದು ಬೇಡ.

ನನಗೆ ಪಿತ್ತಪ್ರಕೋಪವಾಗಿ, ಮೈತುಂಬ ದಂದೆಯಾಗಿ, ಮೈ ನವೆ ಶುರುವಾಗಿ, ಅದನ್ನು ಹಿಂಬಾಲಿಸಿ ಜ್ವರ ಭೇದಿ ಶುರುವಾಗಿ ಹೈರಾಣವಾದರೆ ನಮ್ಮ ಅಜ್ಜಿ ನನ್ನನ್ನು ಎತ್ತಿಕೊಂಡು ಎಸ್.ಪಿ. ಪಂಡಿತರ ಮನೆಗೆ ಕರೆದೊಯ್ಯುತ್ತಿದ್ದಳು. ಎಸ್.ಪಿ. ಪಂಡಿತರು ಈಶ್ವರ ಗುಡಿಯ ಪೌಳಿಯ ಹಿಂದೆ ಇದ್ದ ಒಂದು ಕಟಾಂಜನದ ಮನೆಯಲ್ಲಿ ತಮ್ಮ ಪತ್ನಿಯೊಂದಿಗೆ ವಾಸವಾಗಿದ್ದರು. ಅವರ ಮನೆಯ ಮುಂದೆ ಸೆಲ್ವ ಪಿಳ್ಳೆ ಪಂಡಿತ್, ಆಯುರ್ವೇದ ವೈದ್ಯರು ಎಂಬ ಸೀಮೆಸುಣ್ಣದಲ್ಲಿ ಬರೆದ ಹಲಗೆ ನೇತಾಡುತ್ತಾ ಇರುತ್ತಿತ್ತು. ಎಸ್.ಪಿ. ಪಂಡಿತರು ಹಣ್ಣು ಹಣ್ಣು ಮುದುಕರಾಗಿದ್ದರು. ಒಂದು ಮೇಲುಕೋಟು ಅಡ್ಡಪಂಚೆ. ಒಂದು ಕಾಲದಲ್ಲಿ ಬಿಳಿಯದಾಗಿದ್ದಿರಬಹುದಾದ ಒಂದು ಗಾಂಧೀ ಬನಿಯನ್ನು. ಇಷ್ಟೇ ಅವರ ಉಡುಪು. ಅವರು ಮೇಲಂಗಿ ಹಾಕಿಕೊಂಡಿದ್ದನ್ನು ನಾನು ನೋಡಿಯೇ ಇರಲಿಲ್ಲ. ಅವರ ಹಣೆಯ ಮೇಲಿದ್ದ ಮೂರು ನಾಮಗಳು ಕಣಿವೆಯ ರಸ್ತೆಯಂತೆ ಮೇಲೇರಿ ಏರಿ ಕೊನೆಗೆ ಅವರ ಮಿರಿಮಿರಿ ಮಿಂಚುವ ಬೊಕ್ಕ ನೆತ್ತಿಯಲ್ಲಿ ಅಂತರ್ಧಾನವಾಗುತ್ತಾ ಇದ್ದವು. ಎಸ್.ಪಿ. ಪಂಡಿತರು ಆ ನಾಮ ಹಾಕಿಕೊಳ್ಳುವುದಕ್ಕೇ ಬೆಳಗಿನ ಅರ್ಧಗಂಟೆ ತೆಗೆದುಕೊಳ್ಳುತ್ತಾರೆ ಎಂದು ನಮ್ಮ ಹಳ್ಳಿಯವರು ಮಾತಾಡಿಕೊಳ್ಳುತ್ತಿದ್ದರು. ನಮ್ಮ ಊರಲ್ಲಿ ಉಳಿದೆಲ್ಲ ಗಂಡಸರ ಹಣೆಮೇಲೆ ವಿಭೂತಿ ಪಟ್ಟೆ, ಗಂಧದ ಉಗುರುಗೀಚು, ಅಥವಾ ಸಾದಿನ ಬಟ್ಟು ಮಾತ್ರ ಕಾಣುವಾಗ ಇವರೊಬ್ಬರೇ ನಾಮಧಾರಿಗಳಾಗಿ ಕಂಗೊಳಿಸುತ್ತಾ ''ನಾನೇ ಬೇರೆ ನನ್ನ ಸ್ಟೈಲೇ ಬೇರೆ'' ಎಂಬಂತಿದ್ದರು. ನಮ್ಮ ಭೀಮಜ್ಜಿಯ ಪ್ರಕಾರ ನಡುಗುವ ಕೈಯ ಪಂಡಿತರು ಅಷ್ಟು ನೀಟಾಗಿ ನಾಮ ಹಾಕಿಕೊಳ್ಳೋದು ಸಾಧ್ಯಾನೇ? ಅವರ ಹೆಂಡತಿ ಅಂಡಾಳಮ್ಮನೇ ಅದನ್ನು ಹಾಕುತ್ತಾರೆ. ಈ ಅಂಡಾಳಮ್ಮನ ವಾಸ್ತವ ಹೆಸರು ಆಂಡಾಳಮ್ಮ ಅಂತ. ಆದರೆ ಅವರು

ತುಂಬಾ ಸ್ಥೂಲಕಾಯದವರಾದ ಕಾರಣ ಹಳ್ಳಿಯ ಕಿಲಾಡಿ ಹೆಣ್ಣುಮಕ್ಕಳು ಅವರನ್ನು ಅಂಡಾಳಮ್ಮ ಎಂದು ಕರೆಯುತ್ತಾ ಇದ್ದರು.

ಹತ್ತುವರ್ಷದ ಹುಡುಗನಾಗಿದ್ದ ನನ್ನನ್ನು ನಮ್ಮ ಅಜ್ಜಿ ಸೊಂಟದಲ್ಲಿ ಏರಿಸಿಕೊಂಡು ಹೋಗುವಾಗ ನನಗೆ ಸಿಕ್ಕಾಪಟ್ಟೆ ನಾಚಿಕೆಯಾಗುತ್ತಿತ್ತು. ಆದರೆ ಅಜ್ಜಿ ನನ್ನನ್ನು ಸೊಂಟದಿಂದ ಕೆಳಗಿಳಿಸಲು ಸುತಾರಾಂ ಒಪ್ಪುತ್ತಿರಲಿಲ್ಲ. ಜ್ವರ ಬಂದ ಮಗು ನಡೆಯೋದುಂಟೇ? ನಾನು ಅಜ್ಜಿಯ ನಡೆಗೆ ತೊಡರಾಗಬಾರದೆಂದು ಎರಡೂ ಕಾಲು ಎರಡು ದಿಕ್ಕಿಗೆ ಕಿಸಿದು ಕುಳಿತುಕೊಳ್ಳಬೇಕಾಗುತ್ತಿತ್ತು. ನನ್ನ ಭಾರಕ್ಕೆ ಬ್ಯಾಲೆನ್ಸ್ ಮಾಡಲು ನಾನು ಕೂತಿದ್ದ ಸೊಂಟವನ್ನು ಪಕ್ಕಕ್ಕೆ ತಳ್ಳಿ ಎಡಕ್ಕೆ ಬಾಗಿದ ಮರದ ಹಾಗೆ ನಡೆಯುತ್ತಿದ್ದಳು ನಮ್ಮ ಅಜ್ಜಿ. ಏನ್ರೀ... ಮಗಂಗೆ ಪಿತ್ತದಂಥೇವಾ...? ಎಂದು ಉದ್ದಕ್ಕೂ ಹಳ್ಳಿಯ ಹೆಣ್ಣುಮಕ್ಕಳು ವಿಚಾರಿಸುತ್ತಾ ಇದ್ದರು. ಅಂದರೆ ನನ್ನ ಪಿತ್ತಪ್ರಕೋಪದ ರೋಗ ಆ ದಿನಗಳಲ್ಲಿ ಎಷ್ಟು ಫೇಮಸ್ಸಾಗಿತ್ತು ಎಂಬುದನ್ನು ನೀವೇ ಊಹಿಸಿ!

ಕಟಾಂಜನ ದಾಟಿದರೆ ಪಡಸಾಲೆ. ಅಲ್ಲೇ ಎಸ್.ಪಿ. ಪಂಡಿತರು ತಮ್ಮ ಪುರಾತನಕಾಲದ ಆಯಾಸ ಕುರ್ಚಿಯ ಮೇಲೆ ಕೂತಿರುತ್ತಿದ್ದರು. ಬಟ್ಟೆಯ ಈ ಮಡಿಸುವ ಚೇರನ್ನು ಆಯಾಸ ಕುರ್ಚಿ ಎಂದು ಏಕೆ ಕರೆಯುತ್ತಿದ್ದರೋ ಗೊತ್ತಿಲ್ಲ. ಪಂಡಿತರ ಆಯಾಸ ಕುರ್ಚಿಯದು ಒಂದು ವಿಶೇಷವಿತ್ತು. ಅದಕ್ಕೆ ಕೈ ಊರಲು ಎರಡೂ ಪಕ್ಕ ಚಾಚು ಹಲಗೆಗಳಿದ್ದವು. ತಮಾಷೆಯೆಂದರೆ ಆ ಚಾಚು ಹಲಗೆಗಳಿಗೆ ತೆಗೆದು ಮುಚ್ಚಲು ಎರಡು ಕವಾಟಗಳಿದ್ದು, ಕವಾಟ ತೆಗೆದರೆ ಪುಟ್ಟ ಪುಟ್ಟ ಖಾನೆಗಳಿದ್ದವು. ಆ ಖಾನೆಗಳಲ್ಲಿ ಪಂಡಿತರು ಹುರಿಗಾಳು, ಉಪ್ಪುಗಡಲೆ, ಉತ್ತುತ್ತಿ, ಕಲ್ಲುಸಕ್ಕರೆ ಚೂರು, ಹುರಿದ ಬಟಾಣಿ ಮೊದಲಾದುವನ್ನು ಇಟ್ಟುಕೊಂಡಿರುತ್ತಿದ್ದರು. ಊಟವಾದ ಮೇಲೆ ಈ ಆಯಾಸ ಕುರ್ಚಿಯ ಮೇಲೆ ಒರಗಿಕೊಂಡು– ಓ ಇವಳೇ... ಉಂಡ ಬಾಯಿಗೆ ಒಗ್ಗರಣೆ ಕೊಡೇ ಎಂದು ಪಂಡಿತರು ಕೂಗಿದರೆ, ಅಂಡಾಳಮ್ಮ ಮೆಲ್ಲಗೆ ಪಡಸಾಲೆಗೆ ಚಿತ್ತೈಸಿ ಬೋಂಡವ್ರೋ, ಆಂಬೊಡೆಯೋ ಕೊಡೋರಂತೆ. ಪಂಡಿತರು ಅವನ್ನು ಮೆದ್ದಾದ ಮೇಲೆ, ತಮ್ಮ ಆಯಾಸ ಕುರ್ಚಿಯ ಖಾನೆಯಲ್ಲಿ ಇರುತ್ತಿದ್ದ ಹುರಿಗಾಳು ಮೊದಲಾದವನ್ನು ಅರೆಗಣ್ಣು ಮಾಡಿಕೊಂಡು ಮೆಲುಕಾಡಿಸುತ್ತಾ, ಮುದಿ ಎತ್ತಿನ ಹಾಗೆ ಮೈ ಕೊಡವುತ್ತಾ ಕೂಡೋದು. ಈ ಎಲ್ಲ ವರ್ಣನೆಗಳನ್ನು ನಮ್ಮ ಭೀಮಜ್ಜಿಯ ಬಾಯಲ್ಲಿ ನೀವು ಕೇಳಬೇಕು.

ನಾನು ಮತ್ತು ಅಜ್ಜಿ ಪಂಡಿತರ ಮನೆಗೆ ಹೋದಾಗ ಪಂಡಿತರು... "ಏನೇ... ನಿನ್ನ ಮೊಮ್ಮಗನಿಗೆ ಪಿತ್ತಪ್ರಕೋಪವ್ರೋ..?" ಎಂದು ಮೂತಿ ಸೊಟ್ಟಮಾಡಿ ಕಿಸಕ್ಕನೆ ನಕ್ಕರು. ಅವರು ತಮಿಳನ್ನು ಬಾಯಲ್ಲೂ, ಕನ್ನಡವನ್ನು ಮೂಗಿನಲ್ಲೂ, ಉಳಿದ ಭಾಷೆಗಳನ್ನು ಹಿಂಬಾಗಿಲಲ್ಲೂ ಆಡುತ್ತಾರೆಂದು ಹಳ್ಳಿಯಲ್ಲಿ ಒಂದು ಜೋಕು ಪ್ರಚಲಿತವಾಗಿತ್ತು. ಮತ್ತು ಊರಿನ ಎಲ್ಲ ಹೆಂಗಸರನ್ನೂ ಅವರೂ ಏಕವಚನದಲ್ಲೇ ಕರೆಯುತ್ತಿದ್ದುದು. ಅವರು ತುಂಬಾ ವಯಸ್ಸಾಗಿ ಈಗಲೋ ಆಗಲೋ ಅನ್ನುವಂತಿದ್ದುದರಿಂದ ಯಾರೂ ಅದನ್ನು ತಪ್ಪಾಗಿ ಕೂಡ ಭಾವಿಸುತ್ತಿರಲಿಲ್ಲ. ಕರಕೊಂಬಾ ಇಲ್ಲಿ ನಿನ್ನ ಮೊಮ್ಮಗನನ್ನ... ಎಣ್ಣೇಲಿ ಕರಿದದ್ದು ಏನಾರೂ

ತಿಂದೆಯೇನೋ ಸುಡುಗಾಡು ಮುಂಡೇದೆ...? ಎಂದು ಪಂಡಿತರು ನನ್ನನ್ನು ಕೇಳುವಾಗ ನನಗೆ ಅಳುವೇ ಬಂದುಬಿಟ್ಟಿತು. ಯಾಕೆಂದರೆ ಇನ್ನು ಕೆಲವೇ ಕ್ಷಣಗಳಲ್ಲಿ ಪಂಡಿತರ ಕಾರ್ಕೋಟಕ ವಿಷದ ಕಷಾಯ ನಾನು ಕುಡಿಯಲೇ ಬೇಕಾಗುತ್ತದೆ ಎಂಬುದು ಈ ವೇಳೆಗಾಗಲೇ ನನ್ನ ಅರಿವಿಗೆ ಬಂದಿರುತ್ತಾ ಇತ್ತು. ಪಂಡಿತರು ಒಂದು ಕಷಾಯದ ಬಟ್ಟಲು ನನ್ನ ಅಜ್ಜಿಯ ಕೈಗೆ ಕೊಟ್ಟು, ಈ ಪುಂಡನಿಗೆ ಮೂಗು ಹಿಡಿದು ಈ ಕಷಾಯ ಕುಡಿಸೇ... ಎನ್ನುತ್ತಿದ್ದರು. ಅಜ್ಜಿ ಮೂಗು ಹಿಡಿದು ನನ್ನ ಬಾಯಲ್ಲಿ ಕಷಾಯ ಹುಯ್ಯುತ್ತಿದ್ದಳು. ನುಂಗು ಹಾಳು ರಂಡೇಗಂಡ. ಉಗುಳಿದೆಯೋ ಗೊಟ್ಟ ಹಾಕುತೀನಿ ನೋಡು... ಎಂದು ಕನ್ನಡದ ಸಮಸ್ತ ಅಕ್ಷರಗಳನ್ನು ಅನುನಾಸಿಕಗೊಳಿಸಿ ಪಂಡಿತರು ಹೇಳುತ್ತಾ ಇದ್ದರು. ಆಮೇಲೆ ನಮ್ಮ ಅಜ್ಜಿಯ ಕಡೆ ನೋಡುತ್ತಾ – ಅಡಿಗೆ ಸೋಡ ಇದೆ ಅಲ್ವೇನೇ ಮನೆಯಲ್ಲಿ...? ಎರಡು ವಳ್ಳೆ ಕೊಬ್ಬರಿ ಎಣ್ಣೆಗೆ ಎರಡು ಸ್ಪೂನು ಸೋಡ ಹಾಕಿ ಚೆನ್ನಾಗಿ ರಂಗಳಿಸಿ ಇಟ್ಟುಕೋ... ಇವನ ಚಡ್ಡಿ ಕಳಚಿ ಮೈ ಪೂರ ರಂಗಳಿಸಿದ್ದ ಲೇಪನ ಗಸ ಗಸ ಗಸ ಮೈಗೆ ತಿಕ್ಕು... ದೊಡ್ಡಪತ್ರೆ ಸೊಪ್ಪಿನ ಪಳದ್ಯ ಮಾಡಿ ತಿನ್ನಿಸು.. ಹೋಗೀಗ.. ಸಂಜೆ ವೇಳೆಗೆ ಒಂದು ಚೂರೂ ದಂಥೆ ಇರೋಣಿಲ್ಲ.. ಆಂಡಾಳೇ ಇವಳಿಗೆ ಒಂದು ಒಳಲೆ ಕಾಫೀಕಷಾಯ ಕೊಡೆ ಎಂದು ಪಂಡಿತರು ಹೇಳಿದಾಗ, ಬನ್ರೀ ಸೀತಕ್ಕ ಒಳಗೇ ಎಂಬುದಾಗಿ ಅಂಡಾಳಮ್ಮನ ಅಶರೀರವಾಣಿ ಒಳಮನೆಯಿಂದ ಕೇಳುತ್ತಾ ಇತ್ತು.

ಆವತ್ತು ರಾತ್ರಿ ಭದ್ರಕ್ಕ ನಮ್ಮ ಮನೆಗೆ ಬಂದೋಳು ನನ್ನ ಬಟ್ಟೆಬಿಚ್ಚಿಸಿ ನೋಡಿ... ಅಯ್ಯಾ.. ಆ ಅಳಿಲೆಕಾಯಿ ಪಂಡಿತ ಏನ್‌ಮಾಡ್ತಾನೆ ಬಿಡ್ರಿ ನಿಮ್ಮ.. ಒಂದು ಹೇಳ್ತೀನಿ ಕೇಳ್ರಿ... ರಾತ್ರಿನಾಗ ಮುಸುರೆ ಕಲಗಚ್ಚು ಒಂದು ಚಟ್ಟೀನಲ್ಲಿ ತಕ್ಕಂಡು, ಮಗೀನ ಬಚ್ಚಲದಾಗ ನಿಲ್ಲಿಸಿ ಚಲೋತ್ನಾಗಿ ಮೈ ಮೇಲೆ ಸುರೀರಿ... ಆಮ್ಯಾಲೆ ಉಗುರುಬಿಸಿನೀರಲ್ಲಿ ಮೈತೊಳೀರಿ.. ನಾಳೆ ಇದ್ರೆ ಕೇಳ್ರಿ ಅದರವ್ವನ ದಂಥೆ ಅಂಬೋದು... ಎಂದಳು. ಅನ್ನದ ಅಗುಳು, ಮುದ್ದೆ ಚಕ್ಕಳ, ಸಾರಿನ ಬೇಳೆ ಇವೆಲ್ಲಾ ಇದ್ದ ಮುಸುರೆ ನೀರನ್ನು ಮೈಮೇಲೆ ಸುರಿಸಿಕೊಳ್ಳುವಾಗ ನನ್ನ ಎದೆ ನನ್ನ ಬಾಯಿಗೆ ಬಂದ ಹಾಗೆ ಆಯಿತು. ಏನು ಮಾಡೋದು... ಈ ಮೈ ನವೆ ಹೋಗೋದಾದರೆ ಏನದರಲ್ಲಿ ಸ್ನಾನ ಮಾಡಲೂ ನಾನು ಸಿದ್ದನಾಗಿದ್ದೆ!

ಈ ಸಾರಿಯಂತೂ ಏನು ಮಾಡಿದರೂ ನನ್ನ ಪಿತ್ತದಂಥೆ ಕಡಿಮೆಯಾಗಲೇ ಇಲ್ಲ. ಹಗಲೂ ರಾತ್ರಿ ತಡಪು ಹತ್ತಿದ್ದ ಕೋತಿಯ ಹಾಗೆ ಮೈಪರಚಿಕೊಳ್ಳೋದೆ ಆಯಿತು. ಇದನ್ನು ನೋಡಿ ನಮ್ಮ ಪಕ್ಕದ ಮನೆಯಲ್ಲಿ ಬಾಡಿಗೆಗಿದ್ದ ಗೋಪಾಲಪ್ಪ ಮೇಷ್ಟ್ರಿಗೆ ರೇಗಿಹೋಯಿತು. ಏನು ಜನ ನೀವು.. ಮಗು ಎಷ್ಟು ತ್ರಾಸು ಪಡುತಾ ಇದೆ ಏನಕಥೆ... ಸುಮ್ಮನೆ ನಾಳೆ ಗಾಡಿಮಾಡಿಕೊಂಡು ಚೆನ್ನಗಿರಿಗೆ ಹೋಗಿ ಬನ್ನಿ... ಅಲ್ಲಿ ಬಸಣ್ಣಯ್ಯ ಅಂತ ಒಳ್ಳೇ ಡಾಕ್ಟ್ರು ಇದ್ದಾರೆ... ಕೈಗುಣ ಭಾಳ ಚೆನ್ನಾಗಿದೆ ಅವರದ್ದು... ಹೊಸ ಕಾಲದ ಕಾಹಿಲೆಗಳಿಗೆ ಹಳೇ ಮದ್ದು ಹಿಡಿಸೋದಿಲ್ಲ ಸೀತಕ್ಕ... ಹೊಸ ಕಾಹಿಲೆಗೆ ಹೊಸ ಔಷಧಾನೇ ಬೇಕು... ಇಂಗ್ಲಿಷ್ ಔಷಧ ಬೀಳದೆ ಇದು ಆರಾಮಾಗೋದಿಲ್ಲ... ಸುಮ್ಮನೆ ನಾಳೆ ಚೆನ್ನಗಿರಿಗೆ ಹೋಗ್ಬನ್ನಿ...

ಇಂಗ್ಲಿಷ್ ಔಷಧಿ ತೆಗೆದುಕೊಂಡ ಮೇಲೆ ನನ್ನ ಪಿತ್ತದಂಥೆ ವಾಸಿಯಾಗಿ ನಾನು ಮತ್ತೆ ಸ್ಕೂಲಿಗೆ ಹೋಗಲು ಶುರು ಮಾಡಿದೆ. ಕಾಹಿಲೆ ವಾಸಿಯಾದದ್ದು ಪಂಡಿತರ ಕಷಾಯದಿಂದಲೋ, ಭದ್ರಕ್ಕನ ಮುಸುರೆ ಔಷಧದಿಂದಲೋ, ಬಸಣ್ಣಯ್ಯನವರ ಇಂಗ್ಲಿಷ್ ಔಷಧದಿಂದಲೋ ಅನ್ನೋದು ಕೊನೇಗೂ ಒಂದು ಕೌತುಕದ ಪ್ರಶ್ನೆಯಾಗೇ ಉಳಿಯಿತು. ಇದಕ್ಕಿಂತ ಮುಂದಿನ ಕಥೆ ಬಹಳ ಸ್ವಾರಸ್ಯವಾಗಿದೆ. ಎರಡು ದಿನ ಆದಮೇಲೆ ಅಂಡಾಳಮ್ಮನವರು ನಮ್ಮ ಮನೆಗೆ ಬಂದರು. ಬಂದವರು ಧಸ ಧಸ ತೇಗುತ್ತಾ ಇದ್ದರು. ಕೂತ್ಕಳ್ರೀ.. ಅಂಡಾಳಮ್ಮ.. ನಡಕೊಂಡು ಬಂದದ್ದು ಆಯಾಸಾತೇನೋ ಪಾಪ... ಅಂದರು ಸೀತಜ್ಜಿ. ಬಾಗಿಲು ಮುಂದೆ ಮಾಡ್ರಿ ನಿಮ್ಮತ್ರ ಸೊಲ್ಪ ಗುಟ್ಟಾಗಿ ಮಾತಾಡೋದದೆ... ಅಂದ್ರು ಅಂಡಾಳಮ್ಮ. ಅಜ್ಜಿ ಮುಂಬಾಗಿಲಿಗೆ ಅಗುಳಿಹಾಕಿ ಬಂದು– ಹೇಳ್ರಿ.. ಏನು ವಿಷಯ.. ಅಂದಾಗ ಅಂಡಾಳಮ್ಮ ಹೇಳಿದ್ದಿಷ್ಟು. ಎರಡು ದಿನದಿಂದ ಪಂಡಿತರಿಗೆ ಮೈತುಂಬ ಪಿತ್ತದಂಥೆಯಾಗಿ ಚಿಂಪಾಂಜಿ ಥರ ಹಾರಾಡುತ್ತಾ ಇದ್ದಾರೆ. ಬಸಣ್ಣಯ್ಯ ಕೊಟ್ಟ ಔಷಧ ಇದ್ದರೆ ಇಸ್ಕೊಂಡು ಬಾ ಅಂತ ಅವರು ಅಂಡಾಳಮ್ಮನ್ನ ನಮ್ಮ ಮನೆಗೆ ಕಳಿಸಿದ್ದಾರೆ. ಮತ್ತೂ ಈ ವಿಷಯ ಊರಿನ ಒಂದು ನರಪಿಳ್ಳೆಗೂ ಗೊತ್ತಾಗಬಾರದು ಅಂತ ಹೆಂಡತಿಯ ಮೂಲಕ ತಾಕೀತು ಮಾಡಿ ಕಳಿಸಿದ್ದಾರೆ.

ಸೀತಜ್ಜಿ ನನಗೆ ಬಸಣ್ಣಯ್ಯ ಕೊಟ್ಟಿದ್ದ ಮಾತ್ರೆಗಳನ್ನು ಇನ್ನೂ ಇಟ್ಟುಕೊಂಡಿದ್ದರು. ಇನ್ನೂ ಎರಡುದಿನದ ಮಾತ್ರೆ ಇದ್ದವು. ಒಂದೇ ದಿನಕ್ಕೆ ವಾಸಿಯಾಗಿದ್ದುದರಿಂದ ಔಷಧಿ ಉಳಿದಿತ್ತು. ಮಾತ್ರೆಗಳನ್ನು ಅಂಡಾಳಮ್ಮನವರ ಕೈಗೆ ಹಾಕಿ, ಈಗೊಂದು, ನಾಳೆ ಬೆಳಿಗ್ಗೆ ಒಂದು, ನಾಳೆ ರಾತ್ರಿ ಒಂದು ಕೊಡಿ... ಕಮ್ಮಿಯಾಗ್ಬಹುದು.. ಎಂದರು. ಅಂಡಾಳಮ್ಮ ಮಾತ್ರೆ ಪೊಟ್ಟಣ ತಮ್ಮ ಉಡಿಯಲ್ಲಿ ಮುಚ್ಚಿಟ್ಟುಕೊಂಡು, ಉಪಕಾರವಾಯ್ತ್ರಿ... ನಾನಿನ್ನು ಬರ್ಲಾ... ವಿಷಯ ಮಾತ್ರ ಯಾರಿಗೂ ತಿಳೀಬಾರ್ದು ಮತ್ತೆ... ಎನ್ನುತ್ತಾ ಮೆಲ್ಲಮೆಲ್ಲಗೆ ಮನೆಯ ಕಡೆ ತಮ್ಮ ಶರೀರವನ್ನು ಸಾಗಿಸಿದರು. ಮುಸ್ಸಂಜೆಯಲ್ಲಿ ಸಾವಧಾನ ಅಂಡಾಳಮ್ಮನವರ ಶರೀರ ರಸ್ತೆಯಲ್ಲಿ ಕಾಲಿನ ಚಲನೆ ತೋರಿಸದೆ ಸರಿಯುತ್ತಾ ಹೋದದ್ದು ಈವತ್ತೂ ನನ್ನ ಕಣ್ಣಿಗೆ ಕಟ್ಟಿದ ಹಾಗೆ

**'ಗುಲ್‌ಮೋಹನ್' ಪ್ರಕಟಿಸಿರುವ 'ಅನಾತ್ಮ ಕಥನ'' ದಿಂದ ಆರಿಸಿಕೊಳ್ಳಲಾಗಿದೆ.**

✵

---

ಎಷ್ಟೇ ಸ್ವಾರಸ್ಯವಾಗಿ ಮಾತಾಡಿದರೂ ಎದುರಿಗಿರುವ ಸೋಮಪ್ಪ ನಗದೇ ಇದ್ದಾಗ ನರಸಯ್ಯ ನೀವು ನಗದೇ ಹೀಗೆ ಬಿಗುಮಾನದ ಮುಖ ಮಾಡ್ಕೊಂಡಿದ್ರೆ ಬಹಳ ಅಸಹ್ಯವಾಗಿ ಕಾಣುತ್ತೆ ಅಂದರು ಅದಕ್ಕೆ ಸೋಮಪ್ಪ, ಹೌದು, ನಾನು ಬಾಯಿಬಿಟ್ಟು ನಕ್ಕರೆ ಇನ್ನೂ ಅಸಹ್ಯವಾಗಿರುತ್ತೆ, ಏಕೆಂದ್ರೆ ಮೊನ್ನೆ ತಾನೇ ಎಲ್ಲಾ ಹಲ್ಲೂ ಕೀಳಿಸಿಕೊಂಡು ಬೊಚ್ಚು ಬಾಯಿ ಮಾಡ್ಕೊಂಡು ಬಂದಿದೀನಿ ಅಂದ್ರು.

– ಸುಕೇಶವ

# ಭ್ರಾತೃಪ್ರೇಮ

**- ಇಸ್ಮಾಯಿಲ್**

**ಸಾ**ಯುವುದು ಸುಲಭ ಆದರೆ ಒಬ್ಬರ ಸಾವಿನ ಸುದ್ದಿಯನ್ನು ಸಂಬಂಧಪಟ್ಟವರಿಗೆ ಮುಟ್ಟಿಸುವುದು ತುಂಬ ಕಷ್ಟದ ಕೆಲಸ. ಮೊಬೈಲ್‌ಗಳು, ಇ-ಮೇಲ್‌ಗಳು ಇಲ್ಲದ ಕಾಲದಲ್ಲಿ ಸಾವಿನ ಸುದ್ದಿಯನ್ನು ಯಾರಾದರ ಮೂಲಕವೇ ತಿಳಿಸಬೇಕಾದ ಅನಿವಾರ್ಯತೆ ಇತ್ತು. ಪರ ಊರಿನಲ್ಲಿ ಯಾರಾದರೂ ಸತ್ತರೆ ಟೆಲಿಗ್ರಾಮ್ ಅಥವಾ ಟ್ರಂಕ್‌ಕಾಲ್ ಮೂಲಕ ತಿಳಿಸುವಷ್ಟು ತಾಂತ್ರಿಕತೆ ಇತ್ತು. ನಾನು ಬ್ಯಾಂಕಿಗೆ ಸೇರಿದ ಹೊತ್ತಿನಲ್ಲಿ ಉನ್ನತಾಧಿಕಾರಿಗಳೆಲ್ಲ ಒಂದು ಬಹುಮುಖ್ಯವಾದ ಸಭೆಯಲ್ಲಿ ನಿರತರಾಗಿದ್ದರು. ಬೇರೆ ಬೇರೆ ಊರಿನ ಶಾಖಾಧಿಕಾರಿಗಳು ಆ ಸಭೆಯಲ್ಲಿ ಭಾಗವಹಿಸಿದ್ದರು. ಅಂತಹವರ ಪೈಕಿ ದಾವಣಗೆರೆ ಶಾಖೆಯ ಮ್ಯಾನೇಜರ್ ರಾಮಪ್ರಿಯರಿಗೆ ಒಂದು ಕೆಟ್ಟ ಸುದ್ದಿ ಬಂದಿತು. ಅದನ್ನು ಮೊದಲು ಕೇಳುವ ಸೌಭಾಗ್ಯ ನನ್ನದಾಗಿತ್ತು. ರಾಮಪ್ರಿಯರ ಬ್ರದರ್ ಊರಿನಲ್ಲಿ ಇದ್ದಕ್ಕಿದ್ದಂತೆ ಸತ್ತರು. ಆ ಸುದ್ದಿಯನ್ನು ಅವರಿಗೆ ತಿಳಿಸಿ ತಕ್ಷಣ ಊರಿಗೆ ಹೊರಡುವಂತೆ ಅವರ ಮನೆಯವರು ತಿಳಿಸಿದರು. ನಾನು ತಕ್ಷಣವೇ ಕಾನ್‌ಫರೆನ್ಸ್ ನಡೆಯುತ್ತಿದ್ದ ಸ್ಥಳಕ್ಕೆ ಧಾವಿಸಿದೆ.

ಸಮಯ ಮಧ್ಯಾಹ್ನ ಒಂದೂವರೆಯಾಗಿತ್ತು. ಭೋಜನಕ್ಕಾಗಿ ಸಭೆಗೆ ವಿರಾಮ ಕೊಡಲಾಗಿತ್ತು. ನಾನು ಒಳಗೆ ಹೋಗುತ್ತಿದ್ದಂತೆ ಎಲ್ಲರೂ ತಮ್ಮ ಊಟಕ್ಕಾಗಿ ಸರದಿ ಸಾಲಿನಲ್ಲಿ ನಿಂತಿದ್ದರು. ಅಲ್ಲಿ ರಾಮಪ್ರಿಯರು ಕಾಣಿಸಿದರು. ವಿಷಯವನ್ನು ಆ ಸಮಯದಲ್ಲಿ ತಿಳಿಸಲು ಇಚ್ಛಿಸದೇ ನಾನು ಹಾಗೆ ಸಭಾಂಗಣದಿಂದ ಹೊರಗೆ ಬರಲು ಎದುರಿಗೆ ಗೆಳೆಯ ಕುಮಾರ್ ನನ್ನನ್ನು ತಡೆದು 'ಏನ್ ಬಂದಿದ್ದು?' ಎಂದು ಕೇಳಿದ. ಏನೋ ಸಬೂಬು ಹೇಳಬೇಕೆಂದು ಚೀಫ್ ಮ್ಯಾನೇಜರನ್ನ ನೋಡಬೇಕಾಗಿತ್ತು. ತುರ್ತಾಗಿ ಎಂದು ಹೇಳಿದೆ. "ಒಳ್ಳೆ ಸಮಯಕ್ಕೆ ಬಂದಿದ್ದೀಯಾ, ನೀನು ನನ್ನ ಜೊತೆ ಊಟ ಮಾಡು ಬಾ" ಎಂದು ಬಲವಂತಪಡಿಸಿದ ನನಗೆ ಆ ಸುದ್ದಿಯನ್ನು ಹೇಳಲು ಬಂದಿದ್ದು, ಊಟ ಮಾಡಲು ಮನಸ್ಸಿಲ್ಲ ಎಂದು ಹೇಗೆ ಹೇಳುವುದೆಂದು "ಇಲ್ಲಪ್ಪ ನನ್ನ ಡಬ್ಬಿ ನನಗಾಗಿ ನನ್ನ ಶಾಖೆಯಲ್ಲೇ ಇದೆ" ಎಂದೆ. ಕುಮಾರನಿಗೆ ಏನೋ ಅನುಮಾನವಾಯ್ತು. "ಮಹಾ! ಮನೆ ಊಟ ಎಷ್ಟು ಸಾರಿ ಬೇರೆಯವರಿಗೆ ಕೊಟ್ಟುಬಿಟ್ಟು ಆಫೀಸಿಗೆ ರಜಾ ಹಾಕಿ ಸಿನಿಮಾಕ್ಕೆ ಹೋಗಿಲ್ಲ ನಾವು" ಎಂದು ಹಳೆಯ ಘಟನೆಗಳನ್ನು ನೆನಪು ಮಾಡಿದ. ನಾನು ಅವನೆದುರು ಏನೂ ಮರೆಮಾಚುವಂತಿರಲಿಲ್ಲ. ನಿಜ ಬಾಯಿಬಿಟ್ಟೆ "ದಾವಣಗೆರೆಯಿಂದ ಬಂದಿದ್ದಾರಲ್ಲ ರಾಮಪ್ರಿಯ, ಅವರ ತಮ್ಮ ಇದ್ದಕಿದ್ದ ಹಾಗೆ ಮ್ಯಾಸೀವ್ ಹಾರ್ಟ್ ಅಟ್ಯಾಕ್ ಆಗಿ ಇವತ್ತು ಬೆಳಿಗ್ಗೆ ಹೋಗಿಬಿಟ್ಟರಂತೆ. ಆ ಸುದ್ದಿ ಹೇಳಲು ಬಂದಿದೇನೆ. ಆದರೆ ಪಾಪ ಅವರು ತಮ್ಮ ಊಟದ ತಟ್ಟೆ ಹಿಡಿದು ಕ್ಯೂನಲ್ಲಿ ತಮ್ಮ ಸರದಿಗಾಗಿ ನಿಂತಿದ್ದಾರೆ. ಅದಕ್ಕೆ ಸ್ವಲ್ಪ ಕಾಯೋದಾ

ಅಂತ ಹೊರಗೆ ಬಂದೆ. ಊಟವಾದ ಮೇಲೆ ಹೇಳಿದರಾಯಿತು. ಪಾಪ ತಕ್ಷಣ ಊರಿಗೆ ಹೊರಟುಹೋಗಬೇಕು ಅವರು ಎಂದೆ. ನನ್ನ ಗೆಳೆಯ ಇರಲಿ ಬಾ ಒಂದು ಕಾಫಿಯಾದರೂ ಕುಡಿದು ಹೋಗು ಎಂದು ಬಲವಂತ ಮಾಡಿದ. ಯಾಕೊ ಅದಕ್ಕೂ ಮನಸ್ಸಾಗಲಿಲ್ಲ.

ಊಟ ಮುಗಿಯುತ್ತಿದ್ದಂತೆ ಕಂಡಿತು ತಕ್ಷಣ ಸಭಾಂಗಣದ ಒಳಗೆ ಹೋಗಿ ಊಟ ಮುಗಿಸಿದ ರಾಮಪ್ರಿಯರಿಗೆ 'ನಮಸ್ಕಾರ' ಎಂದೆ ಓಹೋ ಏನ್ ಸಮಾಚಾರ, ಬಾಸ್ ಹತ್ತಿರ ಅರ್ಜೆಂಟಾಗಿ ಯಾವುದಾದರೂ ಪೇಪರ್‌ಗೆ ಸಹಿ ತೆಗೆದುಕೊಳ್ಳಬೇಕಿತ್ತಾ ಎಂದು ವಿಚಾರಿಸಿದರು. ನಾನು ಅಳುಕಿನಿಂದಲೇ ''ಇಲ್ಲಾ ಸಾರ್ ನಿಮಗೆ ಒಂದು ಸುದ್ದಿ ಮುಟ್ಟಿಸಬೇಕಾಗಿತ್ತು'' ಎಂದು ಪೀಠಿಕೆ ಹಾಕುತ್ತಾ ಅವರಿಗೆ ಬಹಳ ಕಷ್ಟಪಟ್ಟು ಅವರ ತಮ್ಮನ ಸಾವಿನ ಸುದ್ದಿಯನ್ನು ಮುಟ್ಟಿಸಿದೆ. ''ಹೌದಾ ಎಷ್ಟು ಗಂಟೆಗಂತೆ'' ಅಂದಷ್ಟೆ ಕೇಳಿದರು. ನಾನು ಹೋದ ಕೆಲಸವಾಯ್ತು ಎಂದು ಹೊರಡುವುದರಲ್ಲಿದ್ದೆ ಅಷ್ಟರಲ್ಲಿ ನನ್ನ ಸ್ನೇಹಿತ – ಸಹದ್ಯೋಗಿ ಕುಮಾರ್ ನನ್ನ ಬೆನ್ನಿಗೆ ಒಂದು ಗುದ್ದಿ ''ಆಯ್ತಾ ನಿನ್ನ ಕೆಲಸ ವಿಷಯ ಹೇಳಿದೆಯಲ್ಲ, ಈಗಲಾದರೂ ಬಾ, ನಾನೂ ಊಟಮಾಡಿಲ್ಲ, ಮಾಡೋಣಾ'' ಎಂದ. ನಾನು ಸುಮ್ಮನಿದ್ದಾಗ ''ನೋಡು ನೀನು ಸಾವಿನ ಸುದ್ದಿ ತಿಳಿಸಬೇಕಲ್ಲ ಎಂದು ಎಷ್ಟು ಒದ್ದಾಡುತ್ತಿದ್ದಿ ಊಟ ಮಾಡಲು ಮನಸ್ಸಿಲ್ಲ ಆದರೆ ಅಲ್ಲಿ ನೋಡು ರಾಮಪ್ರಿಯರ ಭ್ರಾತೃಪ್ರೇಮ, ಊಟವಾದ ಮೇಲೆ ಅವರು ಈಗ ಐಸಕ್ರೀಮ್ ಸ್ಟಾಲಿನ ಮುಂದೆ ಕ್ಯೂ ನಿಂತಿದ್ದಾರೆ. ದೊಡ್ಡವರನ್ನು ನೋಡಿ ಕಲಿಯಬೇಕು ಫಿಲಾಸಫಿನ. ಸ್ಥಿತಪ್ರಜ್ಞತೆ ಎಂದರೆ ಇದು. ಜೀವನ ನಶ್ವರ ಅದು ಹೋದಮೇಲೆ..'' ಎಂದು ಏನೇನೊ ಹೇಳುತ್ತಿದ್ದ. ನಾನು ''ನನಗೆ ಫಿಲಾಸಫಿ ಅರ್ಥವಾಗೊಲ್ಲಕಣೊ'' ಎಂದಷ್ಟೆ ಹೇಳಿ ಅಲ್ಲಿಂದ ಹೊರಬಂದೆ.

ಹುಟ್ಟುತ್ತಾ ಅಣ್ಣತಮ್ಮಂದಿರು ಬೆಳೆದಂತೆ ದಾಯಾದಿಗಳು ಎಂಬ ಮಾತು ಪ್ರಚಲಿತವಿದ್ದರೂ ನಮಗೆ ಒಮ್ಮೊಮ್ಮೆ ಸಂಬಂಧಗಳ ಬಗ್ಗೆ ವಿಸ್ಮಯವೆನಿಸುತ್ತದೆ. ಕಾರಣ ಹುಡುಕಿದಷ್ಟು ವಿಸ್ತಾರವಾಗುತ್ತಾ ಹೋಗುತ್ತದೆ. ದಾಯದಿಗಳೇ ಎಷ್ಟೋ ಸಾರಿ ಬಹಳ ನಿಕಟವಾಗಿರುವುದೇ ಇರುವುದಿಲ್ಲವೆ?

✵

---

ತಾರಾ ಎನ್ನುವವರ ಹೆಸರಿನವರಿಗೆ ಕವನ ಬರೆಯುವುದು
ತುಂಬಾ ಸುಲಭ ಎಂದನಂತೆ ನವ್ಯಕವಿಯೊಬ್ಬ
ಹೇಗಪ್ಪಾ ಅಂತ ಕೇಳಿದರೆ ಅವನು ಹೇಳಿದ್ದು
ನಗ್‌ತಾರಾ, ಕೂತ್ಕೊತಾರಾ, ನಿಂತ್ಕೊತಾರಾ, ಮಲ್ಕೊತಾರಾ
ಅಂತ ಹೇಳ್ತನೇ ಹೋದ

– ಸುಕೇಶವ




# ಜುಲೈ 2011

**- ಜ್ಯೋತಿಷಿ ಸತ್ಯೋತ್ತಮಾಚಾರ್ಯ**

**ಮಾ**ಸ ಸೂಕ್ತಿ – ''ಪೆನ್ ಬರಹ, ಪೆನ್ಸಿಲ್ ಬರಹ, ಕಂಪ್ಯೂಟರ್ ಬರಹ ಇವೆಲ್ಲವನ್ನೂ 'ರಬ್ಬರಿ'ಸಬಹುದು; 'ವೈಟ್ನರಿ'ಸಬಹುದು; 'ಡಿಲೀಟಿ'ಸಬಹುದು. ಆದರೆ ಹಣೇಬರಹ ? ಏನೂ ಮಾಡುವುದಕ್ಕೂ ಆಗೋದಿಲ್ಲ''.

**ಮೇಷ :** ನಿಮ್ಮ ಮೂಲ ಗುಣ : ನಾಯಕತ್ವ, ಶಕ್ತಿ ಹಾಗಾಗಿ ನೀವು ಮಾಡಿದ ತಪ್ಪುಗಳಿಗೆ ತಲೆದಂಡ ತೆತ್ತಬೇಕಾಗುತ್ತದೆ. ಬಿಸಿನೆಸ್‌ನಲ್ಲಿದ್ದರೆ, ಕಂದಾಯ ಇಲಾಖೆಯವರು ಮಧ್ಯರಾತ್ರಿ ನಿಮ್ಮ ಮನೆಯ ಬಾಗಿಲನ್ನು ತಟ್ಟುತ್ತಾರೆ – ಹುಷಾರ್ ! – 'ಟೆಲಿಕಾಂ ರಾಜ' ನಾಗಬೇಡಿ! ಮನೆಯಲ್ಲಿ ಅಡುಗೆ ಮನೆಯ ದಿಕ್ಕಿನಿಂದ, ಹಾಲಿನವನಿಂದ, ಕೆಲಸದವಳಿಂದ ಕಿರಿಕಿರಿ ಹೆಚ್ಚಾಗಲಿವೆ. 17ನೇ ಜುಲೈ ನಂತರ ನಿಮ್ಮ ಸಂಗಾತಿಯೊಬ್ಬರು ಬೇರೆಡೆಗೆ ವಲಸೆ ಹೋಗಲಿದ್ದಾರೆ. ಅವರು ಯಾರಿರಬೇಕೆಂದು ಈಗಲೇ ನಿರ್ಧರಿಸಿ, ಶ್ರದ್ಧೆಯಿಂದ ನವಗ್ರಹ ಪೂಜೆ ಮಾಡಿದ್ದಲ್ಲಿ ನಿಮ್ಮ ಇಷ್ಟ ಫಲಿಸುತ್ತದೆ.

**ವೃಷಭ :** ನಿಮ್ಮ ಮೂಲಗುಣ : ಶ್ರೀಮಂತಿಕೆ ಮತ್ತು ಉದರ ಪೋಷಣೆ, ಜುಲೈನಲ್ಲಿ ಮಿತಿಯಿಲ್ಲದ ಆಹಾರ ಸೇವನೆಯಿಂದ ಹಾಗೂ ಮಾವಿನ ಹಣ್ಣುಗಳ ಪ್ರಭಾವಗಳಿಂದಾಗಿ ನಿಮಗೂ ನಿಮ್ಮ ಅಕ್ಕ ಪಕ್ಕದವರಿಗೂ ತೊಂದರೆಗಳು ಕಾದಿವೆ, ದಂಪತಿಗಳಾದರೆ ಜಗಳದಲ್ಲೇ ಇರುತ್ತೀರಿ. ಅಷ್ಟೇ ಅಲ್ಲ, ನಿಮ್ಮ ಬೀಗರಿಂದಲೂ ಕಿರುಕುಳದ ಚಿಹ್ನೆಗಳಿವೆ. ಹಾಗಾಗಿ ನಿಮ್ಮ ಮಕ್ಕಳು ಅಮೇರಿಕಾದಲ್ಲಿದ್ದರೆ, ಆರು ತಿಂಗಳಿಗಾದರೂ ನೀವು ಅಲ್ಲಿಗೆ ಹೊರಟರೆ ಉತ್ತಮ.

**ಮಿಥುನ :** ನಿಮ್ಮನ್ನಾಳುವ ಗ್ರಹ ಬುಧ, ನಿಮ್ಮ ಜಾತಕದ ಆರನೇ ಮತ್ತು ಹನ್ನೆರಡನೇ ಮನೆಗಳಿಗೆ ನೀವು ಬಾಗಿಲು ಬಡಿದು ಬೀಗ ಹಾಕಿದರೂ ಸರಿ, ರಾಹು ಕೇತು ಅಲ್ಲಿಗೆ ಆಗಾಗ್ಗೆ ನುಗ್ಗುತ್ತಲೇ ಇರುತ್ತಾರೆ ! ಹೀಗಾಗಿ ನಿಮಗೆ ಅನೇಕ ತೊಂದರೆಗಳಿವೆ. ಹಸಿರು, ಹಳದಿ, ಬಿಳಿ ನಿಮ್ಮ ಇಷ್ಟದ ಬಣ್ಣಗಳು, ರಾಜಕೀಯದಲ್ಲಿದ್ದರೆ, ಈ ಬಣ್ಣದ ಬಾವುಟಗಳನ್ನು ಹಿಡಿದು ರಾಜ ಭವನ ಅಥವಾ ರಾಜ್ ಘಾಟ್ ದಿಕ್ಕಿನಲ್ಲಿ ನುಗ್ಗಿ ಲಾಠಿಪ್ರಹಾರಕ್ಕೆ ಒಳಗಾಗುವ ಸಾಧ್ಯತೆಗಳಿವೆ. ತಲೆಜೋಕೆ ! ಆದರೆ ಜುಲೈ ಮಾಸದ ಎರಡನೇ ಅರ್ಧದಲ್ಲಿ ನಿಮ್ಮ ಮಕ್ಕಳು ಹೊರದೇಶಗಳಿಗೆ ಹೊರಟು ಹೋಗಿ ನಿಮಗೆ ಮತ್ತಷ್ಟು ಶಾಂತಿಯನ್ನು ದೊರಕಿಸುತ್ತಾರೆ.

**ಕಟಕ :** ಹೋಟೆಲ್ ಮಾಲೀಕರಿಗೆ ಇದೊಂದು ಸುಭಿಕ್ಷಮಾಸ, ಇಡ್ಲಿ ವಡೆಗಳ ಬೆಲೆ ಇನ್ನಷ್ಟು ಏರಿಸಿ ಲಾಭಗಳಿಸಬಹುದು, ಭಾಷಣಕಾರರಿಗೆ ಪ್ಯಾಲೆಸ್ ಅಥವಾ ರಾಮಲೀಲಾ ಮೈದಾನಗಳಲ್ಲಿ ಸಿದ್ಧಿ ಪ್ರಾಪ್ತಿಯಾಗಲಿದೆ. ಐದನೇ ಹಾಗೂ ಹನ್ನೆರಡನೇ ಮನೆಗಳಲ್ಲಿ ಆ ತುಂಟರು (ಇನ್ಯಾರು? ರಾಹು, ಕೇತು) ಕ್ಯಾಂಪ್ ಹೂಡಿರುವುದರಿಂದ, ಸಾಲಮಾಡಿ ತೊಂದರೆಗೆ ಸಿಲುಕುತ್ತೀರಿ. ಸೂರ್ಯ ನಿಮ್ಮ ಮನೆಯಲ್ಲೇ ಠಿಕಾಣಿಯಲ್ಲಿದ್ದಾನೆ. ಆದ್ದರಿಂದ ಸಾಲ ಮಾಡಿದರೆ ತೀರಿಸದಿದ್ದರೂ ಯೋಚನೆಯಿಲ್ಲ. ಬುದ್ದಿವಂತಿಕೆಯಿಂದ ಸಾಲಮಾಡಿ ಹಾಯಾಗಿರಿ !

**ಸಿಂಹ :** ಸೂರ್ಯ ನಿಮ್ಮ ನಾಯಕ, ನಿಮ್ಮ ಮೂಲಗುಣ : ರಾಜಾರೋಷ, ಇದು ಒಂದು ಅದ್ಭುತ ವರ್ಷವೇನೋ ಸರಿ, ಆದರೆ ನಿಮ್ಮ ಗರ್ಜನೆ ಯಾರಿಗೂ ಕೇಳುವುದೇ ಇಲ್ಲ ! ಒಂಟಿಯಾಗಿದ್ದಲ್ಲಿ ನಿಮಗೊಂದು ಗಂಡಾಂತರ ಕಾದಿದೆ; ಅದು ಮದುವೆ ! ಇದನ್ನು ತಪ್ಪಿಸಿಕೊಳ್ಳಲು ಬ್ರಹ್ಮಚಾರಿ ವಿನಾಯಕನನ್ನು ಪ್ರಾರ್ಥಿಸಿ, ಇಲ್ಲವೇ ಧೈರ್ಯವಾಗಿ ಮದುವೆಯಾಗಿ (ನಾವೆಲ್ಲಾ ಆಗಿಲ್ಲವೇ?) ಮದುವೆಯ ಹೊಸತರಲ್ಲಿ, ನೂತನ ವಧುವರರು ಎಂದುಕೊಂಡು ಬೆಂಗಳೂರಿನ ಬನ್ನೇರುಘಟ್ಟದ ಬಳಿ ಕೈಕೈ ಮಿಲನಿಸಿಕೊಂಡು ಸಿಂಹರಾಶಿಯವರು ಓಡಾಡದಿದ್ದರೇ ಒಳಿತು. ಏಕೆಂದರೆ ಈಚೀಚೆಗೆ ಅಲ್ಲಿಯ ಪ್ರಾಣಿ ಸಂಗ್ರಹಾಲಯದಲ್ಲಿ ವಾರಕ್ಕೊಂದು ಸಿಂಹಗಳು ಪರಲೋಕಕ್ಕೆ ಯಾತ್ರೆ ಬೆಳೆಸುತ್ತಿವೆ.

**ಕನ್ಯಾ :** ನಿಮ್ಮನ್ನಾಳುವ ಗ್ರಹ ಬುಧ, ವಿದ್ಯಾರ್ಥಿಗಳೇ, ಎಚ್ಚರಿಕೆ ! ಪರೀಕ್ಷೆಗಳಲ್ಲಿ ಉತ್ತರ ಪತ್ರಿಕೆಗಳಲ್ಲಿ ನೀವು ಬರೆಯುವುದೊಂದು, ಮೌಲ್ಯಮಾಪಕರು ಓದುವುದೊಂದು. ಹಾಗಾಗಿ ಅನಾವಶ್ಯಕವಾಗಿ ಹಗಲು ರಾತ್ರಿ ಓದ ಬೇಡಿ. ಏನೂ ಬರೆಯದೆಯೋ ರ್‍ಯಾಂಕ್ ಗಿಟ್ಟಿಸುವ ಸಂಭವಗಳಿವೆ. ದೂರ ಪ್ರಯಾಣ ಹಾಗೂ ಆಧ್ಯಾತ್ಮಿಕ ಪ್ರಭಾವಗಳಾಗುವ ಚಿಹ್ನೆಗಳಿವೆ, ಹಾಗಾಗಿ ಕಾಶಿ, ರಾಮೇಶ್ವರದ ಕಡೆ ಪ್ರಯಾಣ ಬೆಳೆಸಿದ್ದಲ್ಲಿ, ಮನೆಗೆ ಹಿಂತಿರುಗಿ ಬರುವುದು ಸಂಶಯವೇ, ಲೌಕಿಕ ಸುಖ ಬಯಸುವ ಕನ್ಯಾರಾಶಿಯವರು ಕಾವಿ ಹಾಗೂ ಖಾದಿಗಳಿಂದ ದೂರವಿದ್ದರೆ ಉತ್ತಮ.

**ವೃಶ್ಚಿಕ :** ನಿಮ್ಮನ್ನಾಳುವ ಗ್ರಹ ಮಂಗಳ ಹಾಗೂ ಗುರು ಈ ವರ್ಷ ನಿಮಗೆ ವಿದ್ಯಾಬುದ್ಧಿ ಕೊಡಲಿದ್ದಾರೆ (ಪಾಪ, ಇಲ್ಲಿಯವರೆಗೂ ನೀವು ಹೇಗೆ ನಿಭಾಯಿಸುತ್ತಿದ್ದರೋ ಏನೊ?) ಮನೆಯ ಕಡೆ ಆರೋಗ್ಯಕ್ಕೆ ಹಾಗೂ ಬ್ಯಾಂಕ್ ಬ್ಯಾಲೆನ್ಸ್‌ಗಳಿಗೆ ಧಕ್ಕೆಗಳು ಕಾಣಬರುತ್ತಿವೆ. ಸೊಳ್ಳೆಗಳಿಂದ ದೂರವಿರಿ, ನಿಮ್ಮ ಸಂಗಾತಿಗೆ ಚಿಕುನ್‌ಗುನ್ಯ ಬಡಿಯಬಹುದು. ನಿಮ್ಮ ಅದೃಷ್ಟ ದಿನಗಳು ಭಾನುವಾರ ಮತ್ತು ಮಂಗಳವಾರ. ಮಿಕ್ಕ ದಿನಗಳಲ್ಲಿ ಅನಾವಶ್ಯಕವಾಗಿ ಯಾರೊಂದಿಗೂ ಜಗಳ ಕೆದಕಬೇಡಿ. ಟ್ರಾಫಿಕ್ ಸಿಗ್ನಲ್‌ಗಳಲ್ಲಿ ಒದೆ ತಿನ್ನುವ ಸಂಭವಗಳಿವೆ.

**ಧನಸ್ಸು :** ನಿಮ್ಮನ್ನಾಳುವ ಗುರು ಹಾಗೂ ಶನಿ ಸುಖವೇನೋ ಕೊಡುತ್ತಾರೆ. ಆದರೆ ರಾಹು ಕೇತು ಪುಂಡರು ನಿಮ್ಮ ಆರನೇ ಹಾಗೂ ಹನ್ನೆರಡನೇ ಮನೆಗಳಲ್ಲಿ ಬಾಡಿಗೆ ಕೊಡದೇ ಇದ್ದು, ನಿಮ್ಮ ದುಡ್ಡಿನ ಜೇಬಿಗೆ ಕತ್ತರಿ ಹಾಕುತ್ತಾರೆ. ಕೈನಲ್ಲಿ ದುಡ್ಡು ನಿಲ್ಲುವುದಿಲ್ಲ, ಮನೆಯ ತಾರಸಿಯಿಂದ ಭಾರಿ ಮಳೆಯಿಂದಾಗಿ ನೀರು ಸೋರಲಿದೆ. ಜುಲೈ ಕೊನೆಯಲ್ಲಿ ನಿಮ್ಮ ಟಿ.ವಿ,

ರೆಫ್ರಿಜಿರೇಟರ್‌ಗಳಿಗೆ ಸಿಡಿಲು ಬಡಿದು ಖರ್ಚು ಹೆಚ್ಚಾಗಲಿದೆ. ಸಂತೋಷದ ವಿಷಯವೆಂದರೆ, ಗಂಡಸರಿಗೆ ತಾಯಿಯಿಂದ ಹೆಂಡತಿಯಿಂದ ಸುಖ ನೆಮ್ಮದಿ ಬರಲಿದೆ. ಹಾಗಂತ ಇಬ್ಬರನ್ನೂ ಒಂದೇ ಸ್ಥಳದಲ್ಲಿ ಇರಲು ಬಿಡಬೇಡಿ!

**ಮಕರ :** ನಿಮ್ಮನ್ನಾಳುವ ಶನಿಯಿಂದಾಗಿ, ನೀವು ಏನು ಕೆಲಸ ಮಾಡಿದರೂ ಶನಿವಾರದಲ್ಲಿ ಮಾಡಿ, ಭಾನುವಾರ ಸುಧಾರಿಸಿಕೊಳ್ಳಿ. ಮಾಸದ ಮೊದಲಲ್ಲಿ ನಿಮ್ಮ ಹೊಟ್ಟೆ ಆಸಿಡ್ ಫ್ಯಾಕ್ಟರಿಯಾಗಲಿದೆ. ಚಾಟ್ ಗಾಡಿಗಳಿಂದ, ಗೋಬಿ ಮಂಚೂರಿಯನ್‌ಗಳಿಂದ ದೂರವಿರಿ. ಹೊಟ್ಟೆ ಮಾತ್ರವಲ್ಲ ಕೀಲುಗಳ ನೋವು ಜ್ವರ ಹೀಗೆ ಇನ್ನಿತರ ತಾಪತ್ರಯಗಳೂ ಜುಲೈನಲ್ಲಿ ನಿಮಗೆ ಲಭ್ಯ. ಶನಿ ದೇವರನ್ನು ಪ್ರಾರ್ಥಿಸಿ, ಎಲ್ಲಾ ತೊಂದರೆಗಳನ್ನೂ ಒಂದೇ ಏಟಿಗೆ ದಯಪಾಲಿಸಪ್ಪಾ ಎಂದು ಕೋರಿಕೊಂಡು, ಡಾಕ್ಟರ್ ವೆಚ್ಚವನ್ನು ಕಡಿಮೆ ಮಾಡಿಕೊಳ್ಳಿ.

**ಕುಂಭ :** ಪ್ರಿಯ ಕುಂಭಗಳೇ, ಶನಿಯು ನಿಮ್ಮನ್ನೂ ಆಳುತ್ತಿದ್ದಾನೆ. ಅವನು ನಿಮ್ಮನ್ನು ಸಮಾಜ ಸುಧಾರಕನಾಗಿಯೂ ಮಾಡಬಹುದು ಸಮಾಜ ಘಾತಕನಾಗಿಯೂ ಮಾಡಬಹುದು, ನಿಮಗೆ ಯಾವುದು ಅನುಕೂಲವೆಂದು ಆಳವಾಗಿ ಯೋಚಿಸಿ ಆ ದಿಕ್ಕಿನಲ್ಲಿ ಕಾರ್ಯಕ್ಕಿಳಿಯಿರಿ. ಈ ಮಾಸದಲ್ಲಿ ನಿಮ್ಮನ್ನು ಹಳೇ ಕರ್ಮಗಳು ಕೋರ್ಟಿನಲ್ಲಿ ಕಾಡುತ್ತವೆ. ಮಾಡದೇ ಇರುವ ತಪ್ಪಿಗೆ ನಿಮಗೆ ಕೋರ್ಟು ಜಾಮೀನನ್ನು ತಿರಸ್ಕರಿಸುತ್ತವೆ, ಮಾಡಿರುವ ತಪ್ಪಿಗೆ ಜಾಮೀನು ಕೊಡುತ್ತದೆ. ಈ ಹಿನ್ನೆಲೆಯಲ್ಲಿ ನಿಮ್ಮ ಜುಲೈ ಮಾಸದ ಕಾರ್ಯಗಳ ಯೋಜನೆಗಳನ್ನು ತಯಾರಿ ಮಾಡಿಕೊಳ್ಳಿ.

**ಮೀನ :** 'ಮೀನಾ'ರವರೇ, ಇದೊಂದು ನಿಮಗೆ ಒಳ್ಳೆಯ ವರ್ಷ ಮಾತ್ರವಲ್ಲ, ಒಳ್ಳೆಯ ಮಾಸವೂ ಹೌದು, ಸಂಬಳದ ಕೆಲಸದಲ್ಲಿ ಲೋಕಾಯುಕ್ತ ಧಾಳಿಗಳಿಂದಾಗಿ ತಾತ್ಕಾಲಿಕವಾಗಿ ಮನೆ ಸೇರಿದ್ದ ಅಧಿಕಾರಿಗಳು ಆಫೀಸುಗಳಿಗೆ ಮರುಪ್ರವೇಶ ಮಾಡಲಿದ್ದಾರೆ, ಗಣಿ ಮಾಲೀಕರಾಗಿದ್ದರಂತೂ ಅದೃಷ್ಟದಿಂದ ಒಂದು ಪಿಕಾಸಿ ಕೈಯಲ್ಲಿ ಹಿಡಿದು ಎಲ್ಲಿ ಅಗೆಯಲಿ, ಅಲ್ಲಿ ಐಶ್ವರ್ಯವನ್ನು ಕಾಣುತ್ತಾರೆ. ಸಾಧಾರಣ 'ಮೀನಾ'ಗಳು ಮನೆ ರಿಪೇರಿ, ಸುಣ್ಣ ಬಣ್ಣಗಳಲ್ಲಿ ತೃಪ್ತಿ ಕಾಣುವವರಿದ್ದಾರೆ. ವಿದ್ಯಾರ್ಥಿಗಳಿಗೆ ಮಾತ್ರ ಓದಿನಲ್ಲಿ ನಾನಾ ಅಡಚಣೆಗಳು ಕಂಡು ಬರುತ್ತವೆ. ಇದರಿಂದಾಗಿ ಅವರು ಓದುವುದೊಂದನ್ನು ಬಿಟ್ಟು ಬೇರೆ ಯಾವುದಾದರೂ ಕಾರ್ಯಕ್ಕಿಳಿಯುವುದು ಒಳಿತು.

ಒಟ್ಟಿನಲ್ಲಿ, ಎಷ್ಟೇ ಕಷ್ಟವಾದರೂ, ಆ ಪರಮಾತ್ಮ ಈ ಜುಲೈ ತಿಂಗಳಲ್ಲಿ ನಿಮ್ಮನ್ನೆಲ್ಲಾ ಕಾಪಾಡಿ ನಿಮ್ಮ ಜೀವನದಲ್ಲಿ ಸುಖಶಾಂತಿಯನ್ನು ತರಲಿ!

✵

---

**ಲೇಖಕರಲ್ಲಿ ವಿನಂತಿ**

ದಯವಿಟ್ಟು ನಿಮ್ಮ ಲೇಖನಗಳನ್ನು ನುಡಿ ಅಥವಾ ಬರಹ ತತ್ರಾಂಶ ಬಳಸಿ ಕಳುಹಿಸಿ. ಹಸ್ತಪ್ರತಿಯನ್ನು ಸ್ವೀಕರಿಸುವುದು ಕಷ್ಟವಾಗುತ್ತದೆ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರಕ್ಕಾಗಿ ಧನ್ಯವಾದಗಳು.

# ಎಲ್ಲವೂ ಡೀ ಎಲ್ಲಿಗಾಗಿ

- ವಾಣೀ ಸುರೇಶ್

**ಈ** ಕೆಳಗಿನ ನಾಲ್ಕು ಉತ್ತರಗಳಲ್ಲಿ ಸರಿಯಾದುದ್ದನ್ನು ಆರಿಸಿ, ಪ್ರಶ್ನೆಗಳನ್ನು ಉತ್ತರಿಸಿ:

1) ಡ್ರೈವಿಂಗ್ ಲೈಸೆನ್ಸ್ ತಗೋಬೇಕಾದ್ರೆ :

ಎ) ಡ್ರೈವಿಂಗ್ ಸುಮಾರಾಗಾದರೂ ಕಲಿತಿದ್ದರೆ ಸಾಕು, ಆಮೇಲೆ ಹೇಗಿದ್ದರೂ ಅಭ್ಯಾಸ ಆಗುತ್ತಲ್ಲ.

ಬಿ) ಯಾವುದಾದರೂ ಡ್ರೈವಿಂಗ್ ಸ್ಕೂಲಿಗೆ ಸೇರಿಕೊಂಡು ನಮ್ಮ ತಲೆನೋವನ್ನು ಅವರಿಗೆ ವರ್ಗಾಯಿಸಿದರೆ ಬೇಕಾದಷ್ಟು...

ಸಿ) ಟ್ರಾಫಿಕ್ ನಿಯಮಗಳ ಒಂದಿನ್ನೂರು ಪೇಜಿನ ಪುಸ್ತಕ ಓದಿ ಬರವಣಿಗೆಯ ಟೆಸ್ಟಲ್ಲೂ ಮತ್ತು ಡ್ರೈವಿಂಗ್ ಟೆಸ್ಟಲ್ಲೂ ಎರಡು ಅಟೆಂಪ್ಟ್‌ಗಳಲ್ಲಿ ಪಾಸಾಗಲೇಬೇಕು.

ಡಿ) ಆರ್.ಟೀ.ವೋ.ನಲ್ಲಿ ಯಾರಾದರೂ ಪರಿಚಯದವರು ಇದ್ದರೆ ಸಾಕಲ್ವೇ?

2) ಖಾಲಿ ರಸ್ತೆಯಲ್ಲಿ ನಿಮ್ಮ ವಾಹನವು ಚಲಿಸುತ್ತಿರುವಾಗ ಹಾಲ್ಟ್ ಎಂಡ್ ಪ್ರೋಸೀಡ್ ಬೋರ್ಡ್ ನಿಮ್ಮೆದುರು ಸಿಕ್ಕಿದರೆ ಏನು ಮಾಡಬೇಕು?

ಎ) ರಸ್ತೆಯಲ್ಲಿ ಯಾರಿದ್ದರೂ – ಇಲ್ಲದಿದ್ದರೂ ವಾಹನವನ್ನು ಮೂರು ಸೆಕೆಂಡುಗಳಷ್ಟು ಕಾಲ ನಿಲ್ಲಿಸಿಯೇ ಮುಂದುವರೆಯಬೇಕು.

ಬಿ) ಖಾಲಿ ರಸ್ತೆಯಾಗಿದ್ದರೆ ನಿಲ್ಲಿಸಬೇಕಿಲ್ಲ.

ಸಿ) ಬ್ರೇಕ್ ಸರಿಯಿಲ್ಲದಿದ್ದರೆ ನಿಲ್ಲಿಸಬೇಕಿಲ್ಲ.

ಡಿ) ಸಮಯ ಸಂದರ್ಭ ನೋಡಿ ನಿರ್ಧರಿಸಿದರಾಯಿತು.

3) ಟ್ರಾಫಿಕ್ ಪೋಲೀಸಿನವನು ನಿಮ್ಮ ವಾಹನವನ್ನು ತಡೆದು ನಿಲ್ಲಿಸಿದಾಗ ನೀವೇನು ಮಾಡಬೇಕು?

ಎ) ಶರವೇಗದಲ್ಲಿ ನಿಮ್ಮ ವಾಹನವನ್ನು ಮುನ್ನಡೆಸಿ ಅಲ್ಲಿಂದ ಆದಷ್ಟು ಬೇಗ ಕಣ್ಮರೆಯಾಗಬೇಕು.

ಬಿ) ತಕ್ಷಣ ನಿಮ್ಮ ವಾಹನವನ್ನು ರಸ್ತೆಯ ಬದಿಯಲ್ಲಿ ಸುರಕ್ಷಿತವಾಗಿ ನಿಲ್ಲಿಸಬೇಕು.

ಸಿ) ಪರ್ಸಿನಲ್ಲಿ ಸಾಕಷ್ಟು ಹಣವಿದೆಯೇ ಎಂದು ಮುಟ್ಟಿ ನೋಡಿಕೊಳ್ಳಬೇಕು.

ಡಿ) ನಿಮ್ಮ ನೆಂಟರಿಷ್ಟರು ಮತ್ತು ಪರಿಚಯದವರಲ್ಲಿ, ಇಂಥಾ ವಿಷಯಗಳಲ್ಲಿ ಅತಿ ಹೆಚ್ಚಿನ ವಶೀಲಿ ಮಾಡಬಲ್ಲವರ ಪೂರ್ತಿ ಹೆಸರನ್ನು ತಕ್ಷಣ ಜ್ಞಾಪಿಸಿಕೊಳ್ಳಲು ಪ್ರಯತ್ನಿಸಬೇಕು.

4) ನಿಮ್ಮ ವಾಹನವನ್ನು ಓಡಿಸಬೇಕಿರುವ ವೇಗ..

ಎ) ಚಾಲಕನ ವಯಸ್ಸು ಹಾಗೂ ಮಾಡನ್ನು ಅವಲಂಬಿಸಿರುತ್ತದೆ.

ಬಿ) ಇಪ್ಪತ್ತರಿಂದ ಎಪ್ಪತ್ತು ಮೈಲಿಯವರೆಗೆ ರಸ್ತೆಯ ಮಿತಿಗೆ ಅನುಗುಣವಾಗಿ ಅಲ್ಲಲ್ಲಿ ಹಾಕಿರುವ ಬೋರ್ಡುಗಳ ಸೂಚನೆಯನ್ನು ಅವಲಂಬಿಸಿರುತ್ತದೆ.

ಸಿ) ರಸ್ತೆಯಲ್ಲಿರುವ ಹಳ್ಳಗಳನ್ನು ಹಾಗೂ ಪಕ್ಕದಲ್ಲಿ ಅಗೆದಿರುವುದನ್ನು ಅವಲಂಬಿಸಿರುತ್ತದೆ.

ಡಿ) ವಾಹನ ಯಾವ ಇಸವೀದು ಅನ್ನೋದನ್ನ ಅವಲಂಬಿಸಿರುತ್ತದೆ.

5) ಏಕ ಕಾಲದಲ್ಲಿ ವಾಹನ ಚಾಲನೆ ಮಾಡುತ್ತಾ ಮತ್ತು ನಿಮ್ಮ ಸೆಲ್ ಫೋನನ್ನು ಒಂದು ಕೈಯ್ಯಲ್ಲಿ ಹಿಡಿದು ಮಾತಾಡುತ್ತಿರುವಾಗ, ಟ್ರಾಫಿಕ್ ಪೋಲಿಸ್ ಪೇದೆಯ ಕೈಗೆ ಸಿಕ್ಕಿಹಾಕಿಕೊಂಡರೆ...

ಎ) ಅದಕ್ಕೇ ಅನುಭವಸ್ಥರು ಹೇಳೋದು – ಹೊರಗೆ ಹೊರಟಾಗ ಕೈಗಾವಲಿಗೆ ಯಾವಾಗಲೂ ಪರ್ಸ್‌ನಲ್ಲಿ ಒಂದಷ್ಟು ದುಡ್ಡಿರಲೇಬೇಕೂಂತ...

ಬಿ) ಮೊದಲನೆಯ ಬಾರಿಯ ತಪ್ಪಾಗಿದ್ದರೆ, ತಡವರಿಸಿಕೊಳ್ಳುವಷ್ಟು ವಿಪರೀತ ಮೊತ್ತದ ಜುಲ್ಮಾನೆ, ಎರಡನೆಯ ಬಾರಿಗಾದರೆ ಡ್ರೈವಿಂಗ್ ಲೈಸೆನ್ಸ್ ರದ್ದು ಇತ್ಯಾದಿ ಬವಣೆಗಳ ಸರಮಾಲೆ.

ಸಿ) ಹುಡುಗಿಯರು, ಮಹಿಳೆಯರು ತಮ್ಮ ಪರ್ಸಿನಲ್ಲಿ, ದುಡ್ಡಿನ ಜೊತೆ ಒಂದು ಚಿಕ್ಕ ಸೀಸೆ ಗ್ಲಿಸರಿನ್ನನ್ನೂ ಇರಿಸಿಕೊಂಡಿದ್ದರೆ ಒಳ್ಳೆಯದು.

ಡಿ) ಸೆಲ್ ಫೋನಿನಲ್ಲಿ ಮಾತಾಡುವಾಗ ಹೆಚ್ಚಿಗೆ ನಗದೇ ಇದ್ದರಾಯ್ತು, ಏಕೆಂದರೆ ಆಗ ಸಿಕ್ಕಿ ಹಾಕಿಕೊಳ್ಳುವ ಚಾನ್ಸ್ ಕಡಿಮೆ.

6) ಯಾವಾಗ ನಿಮ್ಮ ವಾಹನದ ಹಾರ್ನಿನ ಉಪಯೋಗ ಮಾಡಬಹುದು?

ಎ) ಎದುರಿಗೆ ಯಾವುದಾದರೂ, ಎಮ್ಮೆ, ದನ–ಕರು, ಕುರಿ–ಮೇಕೆ ಇತ್ಯಾದಿ ಪ್ರಾಣಿಗಳು ಅಡ್ಡ ಬಂದಾಗ.

ಬಿ) ರಜೆಯಲ್ಲಿ ಜಾಲಿಯಾಗಿ ಪ್ರವಾಸಕ್ಕೆ ಹೊರಟಿರುವಾಗ.

ಸಿ) ಅಪಘಾತವನ್ನು ತಪ್ಪಿಸುವಂತಿದ್ದಾಗ ಮಾತ್ರ ಹೊರತು, ಬೇರೆಯಂತೆ ಅಲ್ಲ.

ಡಿ) ಮುಂದಿರುವವರನ್ನು ಬೇಗ ಹೋಗೀಂತ ಬೈಯ್ಯಬೇಕಾದರೆ ಇನ್ಹೇಗೆ ಸಾಧ್ಯ ಸಾರ್?

7) ದುರದೃಷ್ಟವಶಾತ್ ಕುಡಿತದ ಅಮಲಿನಲ್ಲಿ ವಾಹನ ಚಾಲನೆ ಮಾಡುತ್ತಿರುವುದು ಸಾಬೀತಾಗಿ, ಟ್ರಾಫಿಕ್ ಪೋಲೀಸ್ ಪೇದೆಯ ಕೈಯಲ್ಲಿ ಸಿಕ್ಕಿ ಹಾಕಿಕೊಂಡ ಸಂದರ್ಭ ಬಂದರೆ....

ಎ) ಐದನೆಯ ಪ್ರಶ್ನೆಯ 'ಎ' ಉತ್ತರ.

ಬಿ) ಲೈಸೆನ್ಸಿನ ರದ್ದು.

ಸಿ) 'ಇದೊಂದ್ಸಲ ದಯವಿಟ್ಟು ಕ್ಷಮಿಸಿಬಿಡಿ ಸಾರ್. ನಿನ್ನೆ ನನ್ನ ಗರ್ಲ್‌ಫ್ರೆಂಡು ನಂಗೆ ಕೈಕೊಟ್ಟು ಹೊರ್ಟುಹೋದಳು ಸಾರ್... ಅದಕ್ಕೇ ಇವತ್ತು ಸ್ವ..ಲ್ಪ ಜಾಸ್ತಿಯಾಗೋಯ್ತು....' ಅಂತ ಗಿಂಜ್ತಾ ಗೋಗರೆದು ನೋಡಬಹುದು.

ಡಿ) ಯಾವುದಕ್ಕೂ, ಪೋಲೀಸ್ ಡಿಪಾರ್ಟ್‌ಮೆಂಟಿನಲ್ಲಿರುವ ನಿಮ್ಮ ಚಿಕ್ಕಪ್ಪನ ಮಗನ ಹೆಸರು ಮತ್ತು ನಿಮ್ಮ ಸಂಬಂಧವನ್ನು ಹೇಳಿ ಒಂದು ಚಾನ್ಸ್ ನೋಡಬಹುದು.

8) ರಸ್ತೆ ಮಧ್ಯೆ ಎಳೆದಿರುವ ಗೆರೆಯನ್ನು ದಾಟಿ ನೀವಿರುವ ಲೇನ್ ಕ್ರಾಸ್ ಮಾಡಿದರೆ ಏನಾಗುತ್ತದೆ?

ಎ) ಏನೂ ಆಗುವುದಿಲ್ಲ.

ಬಿ) ಆಟೋ, ಮೋಟಾರ್ ಸೈಕಲ್ ಮತ್ತು ಸ್ಕೂಟರಿಗೆ ಮಾತ್ರ ಈ ನಿಯಮ ಅನ್ವಯಿಸುತ್ತದೆ.

ಸಿ) ಎಂದೆಂದೂ ದಾಟಬಾರದಷ್ಟೇ ಅಲ್ಲ, ಸದಾ ನಮ್ಮ ಲೇನಿನಲ್ಲೇ ಇರಬೇಕು.

ಡಿ) ಲೇನು ಅಂದ್ರೇನು ಸಾರ್?

9) 'ವಾಹನದ ಗಾತ್ರಕ್ಕನುಗುಣವಾಗಿ ರಸ್ತೆಯ ಹಕ್ಕು' – ನ್ಯಾಯಸಮ್ಮತ.

ಎ) ಹೌದು, ಆದರೆ ಆಟೋರಿಕ್ಷಾ, ಮೋಟರ್ ಬೈಕಿನವರನ್ನು ಇದಕ್ಕೆ ಹೊರತುಪಡಿಸಿ.

ಬಿ) ತಪ್ಪು ಉತ್ತರ. ಸೈಕಲ್ ಸವಾರರಿಗೂ ಸಹಾ ಗಜಗಾತ್ರದ ಲಾರಿಯವರಂತೆ ರಸ್ತೆಯ ಹಕ್ಕಿನಲ್ಲಿ ಸಮಪಾಲಿರುತ್ತದೆ.

ಸಿ) ಹೌದು, ಅಷ್ಟು ಗೊತ್ತಿಲ್ಲವೇ? ಯಾವಾಗಲೂ ಮೈಟ್ ಈಸ್ ರೈಟ್.

ಡಿ) ಆನೆಯ ಗಾತ್ರಕ್ಕೆ ಆಡಿನ ಗಾತ್ರ ಸಾಟಿಯೇ – ಹೇಳಿ ಸಾರ್!

10) ನಿಮ್ಮ ವಾಹನ ಚಲಿಸುತ್ತಿರುವಾಗ ಯಾರಾದರೂ ಪಾದಚಾರಿಗಳು ಅಡ್ಡವಾದರೆ...

ಎ) ಜೋರಾಗಿ ಹಾರ್ನ್ ಮಾಡಿ ಬೆಚ್ಚಿಬೀಳಿಸಿ, ಆಮೇಲೆ ಅವರ ಹಿಂದಿನಿಂದಾ ಬಳಸಿಕೊಂಡು ಹೋದರಾಯ್ತು.

ಬಿ) ವಾಹನ ನಿಲ್ಲಿಸಿ ಅವರಿಗೆ ನಿರಾಳವಾಗಿ ಹೋಗಲು ಅನುವು ಮಾಡಿಕೊಡಬೇಕು.

ಸಿ) ''ಮನೆಯಲ್ಲಿ ಹೇಳಿ ಬಂದಿದ್ದೀರೇನ್ರೀ ಸ್ವಾಮಿ / ಮೇಡಂ'' ಎಂದು ಕಿಟಕಿಯಾಚೆ ತಲೆ ಹಾಕಿ ಕೂಗುಬೇಕು.

ಡಿ) ಇಂಥಾ ಪ್ರಶ್ನೆ ಕೇಳಿ ಸುಮ್ಮನೆ ಯಾಕೆ ನಮ್ಮ ತಲೆ ತಿನ್ತೀರಾ ಸಾರ್?

11) ಅಂಬ್ಯುಲೆನ್ಸ್‌ವೊಂದು ನಿಮ್ಮ ವಾಹನದ ಹಿಂದೆ ಸೈರನ್ ಸದ್ದು ಮಾಡುತ್ತಾ ಬಂದರೆ ನೀವೇನು ಮಾಡಬೇಕು?

ಎ) ಪಕ್ಕಕ್ಕೆ ಸರಿದು, ಸಾಧ್ಯವಾದರೆ ನಿಲ್ಲಿಸಿ, ದಾರಿಯನ್ನು ಅವರಿಗೆ ಬಿಟ್ಟುಕೊಡಬೇಕು.

ಬಿ) ಅಂಬ್ಯುಲೆನ್ಸ್‌ನವರು ರಾಂಗ್ ಸೈಡಿನಲ್ಲಿ ಹೋಗ್ತಾರೆ ಬಿಡಿ, ಅವರಿಗೆ ರಸ್ತೆಯ ನಿಯಮಗಳೇನೂ ಅನ್ವಯಿಸುವುದಿಲ್ಲ.

ಸಿ) ಅಂಬ್ಯುಲೆನ್ಸಿನಲ್ಲಿರುವ ವ್ಯಕ್ತಿಯ ಬಗ್ಗೆ "ಅಯ್ಯೋ ಪಾಪ ಯಾರೋ ಏನೋ" ಅಂತಂದ್ಕೊಂಡು ದೇವರಲ್ಲಿ ನಿಮ್ಮ ಪ್ರಾರ್ಥನೆ ಸಲ್ಲಿಸಿ, ನಿಮಗೆ ಸಾಧ್ಯವಾದರೆ ಮಾತ್ರ ಅವರಿಗೆ ಸೈಡ್ ಕೊಡುವುದು.

ಡಿ) ಇವೆಲ್ಲ ಬಿಟ್ಟು ಇನ್ನೇನು ಮಾಡಬೇಕೂಂತ ತಾವು ಹೇಳೋದು?

12) ಅಪರಂಜಿಯ ಈ ಸಂಚಿಕೆಯಲ್ಲಿರುವ ಈ ಟೆಸ್ಟಿನಿಂದ ಏನು ಪ್ರಯೋಜನ?

ಎ) ನಿಮ್ಮ ಅಮೂಲ್ಯ ಐದು–ಹತ್ತು ನಿಮಿಷಗಳ ಸದ್ವಿ / ದುರ್ವಿ–ನಿಯೋಗವಾದದ್ದು.

ಬಿ) ಅಮೆರಿಕೆಯ ಡ್ರೈವಿಂಗ್ ಟೆಸ್ಟಿನ ಪಕ್ಷಿನೋಟ ತಿಳಿದಂತಾದದ್ದು.

ಸಿ) ಇಂಥಾ ಪೆದ್ದು ಪ್ರಶ್ನೆಯನ್ನು ಕೇಳಿಸಿಕೊಳ್ಳಬೇಕಾಗಿ ಬಂದಿದ್ದು!

ಡಿ) ಏನಿರಬಹುದು ಅಂತ ನಾನೂ ತಲೆ ಕೆರೆದುಕೊಳ್ಳುತ್ತಿದ್ದೀನಿ!

ಅತ್ಯಂತ ಸಭ್ಯತೆಯಿಂದ ಕೂಡಿದ, ನಂಬಲು ಅಸಾಧ್ಯವಾದಂಥಹ, ಸ್ಟ್ರೀಟ್ ಸ್ಮಾರ್ಟ್ ಅಂತೂ ಅಲ್ಲವೇ ಅಲ್ಲದ ಉತ್ತರಗಳೇ ಈ ಟೆಸ್ಟಿನ ಸರಿ ಉತ್ತರಗಳು – ಎಂದು ಬೇರೆ ಬಾಯಿಬಿಟ್ಟು ಹೇಳಬೇಕಿಲ್ಲ ತಾನೇ?!?

✵

---

## ಓದುಗರ ಗಮನಕ್ಕೆ

* ಅಪರಂಜಿ ಚಂದಾ ವಿವರ ಬೇಕೆ?
* ಪತ್ರಿಕೆ ತಲುಪದ ವಿಚಾರ ನಮಗೆ ತಿಳಿಸಬೇಕಿದೆಯೆ?
* ನಮ್ಮ ಪತ್ರಿಕೆಗೆ ಲೇಖನ ಬರೆಯಲಿದ್ದೀರಾ?

ಇಂತಹ ವಿಷಯಗಳ ಬಗ್ಗೆ ಉಪಸಂಪಾದಕರೊಂದಿಗೆ ದೂರವಾಣಿ ಮಾಡಲು ಬಯಸುತ್ತೀರಾ? ಸಂತೋಷ. ಆದರೆ ಬೆಳಗ್ಗೆ 7.00 ರಿಂದ 8.30 ಸಮಯದಲ್ಲಿ ಮಾತ್ರ ಕರೆ ಮಾಡಲು ವಿನಂತಿ. ಉಳಿದ ಸಮಯ ಅವರ ಇತರ ಕೆಲಸಗಳಿಗೆ ಮೀಸಲಾಗಿರುತ್ತದೆ ಎಂಬುದು ನಿಮ್ಮ ನೆನಪಿನಲ್ಲಿರಲಿ.

**ಹಾಗೆಯೇ ಗಮನಿಸಿ**: ನೀವು ದೂರವಾಣಿ ಮಾಡಿದಾಗ ನಿಮ್ಮ ಕರೆಯನ್ನು ಯಾರು ಸ್ವೀಕರಿಸಿದರೂ, ಅವರೊಂದಿಗೆ ನೇರವಾಗಿ ಮಾತಿಗಿಳಿಯದೆ 'ಉಪಸಂಪಾದಕರು ಇದ್ದಾರೆಯೆ?' ಎಂದು ವಿಚಾರಿಸಿ, ಅವರೊಂದಿಗೆ ಮಾತ್ರ ಮಾತನಾಡುವುದು ಸೂಕ್ತ. ಅವರು ಸಿಗದಿದ್ದರೆ ಅವರು ಲಭ್ಯವಿರುವ ಸಮಯ ತಿಳಿದುಕೊಂಡು ನಂತರ ಕರೆ ಮಾಡಬಹುದು.

ಇದಕ್ಕಿಂತಲೂ ಒಂದು ಸರಳ ವಿಧಾನವಿದೆ. ನಿಮಗೆ ಬೇಕಾದ ಮಾಹಿತಿ ಕೋರಿ ಒಂದು ರಿಪ್ಲೈ ಕಾರ್ಡ್ ಬರೆಯಿರಿ. ಲಿಖಿತ ಉತ್ತರ ಸಿಗುತ್ತದೆ. ಅಂದಹಾಗೆ ನಿಮ್ಮ ವಿಳಾಸ, ಚಂದಾ ಸಂಖ್ಯೆ ತಿಳಿಸಲು ಮರೆಯದಿರಿ! ದಯವಿಟ್ಟು ಸಹಕರಿಸಿ.

– ಸಂಪಾದಕರು

## ತುಂತುರು ತುಂತುರು ತುಂತುರು ತುಂತುರು ತುಂತುರು ತುಂತುರು ತುಂತುರು

- ದಂನಳ

- ಬಾಬಾ ರಾಮದೇವ್‌ಗೆ ವ್ಯಾಯಾಮಶಾಲೆ ಬೇಕಾಗಿಲ್ಲ. ಅವರೇ ಒಂದು ವ್ಯಾಯಾಮ ಶಾಲೆ.
- ಬಿಟ್ಟಿ ಊಟ ಎಂದರೆ ಮನುಷ್ಯರಿಗೂ ನಾಯಿಗಳಿಗೂ ಏನೂ ವ್ಯತ್ಯಾಸ ಇಲ್ಲವಂತೆ. ಇಬ್ಬರೂ ಸಾಕಷ್ಟು ಸಂಖ್ಯೆಯಲ್ಲಿ ಜಮಾಯಿಸುತ್ತಾರೆ.
- ಪೊಲೀಸರಿಗೆ ಶರಣಾದ ಇಸ್ರೊ....
  .....ಛೆ ಛೇ ಅದು ಫುಟ್ಬಾಲ್ ಪಂದ್ಯ ಅಷ್ಟೆ.
- If you continue doing what you have done you will get what you have got.
- ಶಿವಮಣಿ ಬಗ್ಗೆ ಸಿನಿಮಾ ತಯಾರಿಸಿದರೆ ಅದರ ಟೈಟಲ್ ಏನಿರಬಹುದು? ಡ್ರಂ ಮಾರೋ ಡ್ರಂ!
- 'ನಿನ್ನ ಬೆಸ್ಟ್ ಫ್ರೆಂಡ್ ನಿನ್ನ ಗಂಡನ ಜತೆ ಓಡಿ ಹೋದರೆ' ನಿನ್ನ ಪ್ರತಿಕ್ರಿಯೆ ಏನು ಎಂದರೆ 'ಅವಳ ಬಗ್ಗೆ ಮರುಕಪಡುತ್ತೇನೆ' ಎನ್ನುವುದೆ ಇವಳು?

**ಮೆಲುಕು ಹಾಕುವಂತಹ ಮಾತುಗಳ ಗುಚ್ಛ**

- ಹಿಂದೆಲ್ಲ ಮಕ್ಕಳು ತಮ್ಮ ತಂದೆತಾಯಂದಿರನ್ನು 'ಓಲ್ಡ್ ಫ್ಯಾಷನ್ಡ್' ಎಂದು ಕರೆಯುತ್ತಿದ್ದರು. ಈಗ ಬರೇ 'ಓಲ್ಡ್' ಎನ್ನುತ್ತಾರೆ.
- You will never get a second chance to make a first impression.
- ಕೆಲವರು ಯಾವಾಗಲೂ ಶೆರ್ಪಾಗಳಾಗಿಯೇ ಇರುತ್ತಾರೆ; ಪರ್ವತಾರೋಹಿ ಗಳಾಗುವುದೇ ಇಲ್ಲ.
- ನಾನು ಮಗುವಿನಂತೆ ನಿದ್ರಿಸುತ್ತೇನೆ ಎನ್ನುವವರಿಗೆ ಸಾಮಾನ್ಯವಾಗಿ ಮಗು ಇರುವುದೇ ಇಲ್ಲ.
- ಎಣ್ಣೆ ಎಂಬ ಪದಕ್ಕೆ ರಾತ್ರಿಯೇ ಒಂದು ಅರ್ಥ. ಹಗಲೇ ಒಂದು ಅರ್ಥ.
- ಬೆಳಕಿಗಿಂತ ಶಬ್ದ ಖಂಡಿತ ನಿಧಾನವಾಗಿ ಚಲಿಸುತ್ತದೆ. ಉದಾಹರಣೆಗೆ, ಅಪ್ಪ ತನ್ನ 18 ವರ್ಷದ ಮಗನಿಗೆ ಕೊಡುವ ಉಪದೇಶ ತಲುಪುವ ಹೊತ್ತಿಗೆ ಅವನಿಗೆ 40 ವರ್ಷವಾದರೂ ಆಗಿರುತ್ತದೆ!
- Metro: when boring is interesting.
- ಈತನ ಹೆಸರು Anger. ಆದರೆ ಮಹಿಳೆಯರಿಗೆ ಸಂತೋಷ ತರುತ್ತಾನೆ. ಏಕೆಂದರೆ ಇವನು ಕಾಸ್ಮೆಟಿಕ್ ಸರ್ಜನ್.
- ನಾನು ಮೈ ಬಗ್ಗಿಸುವುದಿಲ್ಲ. ಬಗ್ಗಿಸಲೇಬೇಕು ಎಂದಿದ್ದರೆ ದೇವರು ನೆಲದ ಮೇಲೆ ವಜ್ರದ ಚೂರುಗಳನ್ನು ಹಾಕುತ್ತಿದ್ದ.
- ಅಣ್ಣಾ ಹಜಾರೆ ಮ್ಯಾನ್ ಆಫ್ ದಿ ಮೊಮೆಂಟ್ ಅಥವಾ ಮ್ಯಾನ್ ಆಫ್ ದಿ ಮೂವ್‌ಮೆಂಟ್? ❋

# ಇಲ್ಲೀಗಲ್ ಮಣ್ಣಂಗಟ್ಟಿ

**- ನಾಗೇಶ ಹೆಗಡೆ**

**ಗೇ**ಟ್ ಸದ್ದಾಯಿತು. ಲಸಿತ್ ಮಾಲಿಂಗ ಎಸೆದ ಬಾಲ್‌ನಂತೆ ಜಿಗಿದು ಭೌ ಎನ್ನುತ್ತ ಕಾಫಿ (ನಮ್ಮ ನಾಯಿ) ಗೇಟಿನತ್ತ ಧಾವಿಸಿತು. ಅಡುಗೆ ಮನೆಯಿಂದ ಕಾಮೆಂಟ್ ಬಂತು: 'ಮತ್ತೊಬ್ಬ ಕೋಟ್ಯಾಧೀಶ ನಿಮ್ಮ ಭೇಟಿಗೆ ಬಂದಿರಬೇಕು ನೋಡ್ರಿ' ಎಂದಳು ಶ್ರೀಮತಿ.

ಬೆಂಗಳೂರಿನ ನೆರಳಿನಲ್ಲಿರುವ ಈ ಊರಲ್ಲಿ ಪ್ರತಿ ಎಕರೆ ಭೂಮಿಯ ಬೆಲೆ ಒಂದು ಕೋಟಿ ಆಗಿದೆ. ಸರಕಾರಿ ಲೆಕ್ಕದ 'ಸಣ್ಣ ಹಿಡುವಳಿದಾರ'ರು ಕೂಡ ಎರಡೂವರೆ ಕೋಟಿ ಸಂಪತ್ತಿಗೆ ಮತ್ತು ಬಿಪಿಎಲ್ ಕಾರ್ಡ್‌ಗೆ ಒಡೆಯರಾಗಿದ್ದಾರೆ. ಅಂಥ ಭಾರೀ ಧನಿಕರು ಎಂದಾದರೂ ಸ್ವಂತ ಉಳುಮೆ ಮಾಡುತ್ತಾರೆಯೆ? ಕೂಲಿಗಳಿಂದ ಮಾಡಿಸಬೇಕು. ಆದರೆ ಕೂಲಿಗಳು ಸಿಗುತ್ತಿಲ್ಲ; ಸಿಕ್ಕರೂ ದುಬಾರಿ. ಏಕೆಂದರೆ ಅಪರೂಪಕ್ಕೆ ಕೂಲಿ ಕೆಲಸ ಮಾಡುತ್ತಿದ್ದ ಚಿಕ್ಕ ಹಿಡುವಳಿದಾರರೆಲ್ಲ ಈಗ ಕೋಟ್ಯಾಧೀಶರಾಗಿದ್ದಾರೆ. ಆದ್ದರಿಂದ ಕೂಲಿ ಕೆಲಸ ಮಾಡಿಸುವುದೆಂದರೆ ದಶಕೋಟ್ಯಾಧೀಶರಿಗೆ ಮಾತ್ರ ಸಾಧ್ಯ. ಅವರು ಇಂಥ ಸಣ್ಣ ಹಳ್ಳಿಯಲ್ಲಿ ಎಲ್ಲಿರುತ್ತಾರೆ? ಎಲ್ಲೋ ವಿಧಾನಸೌಧದ ಪಕ್ಕದ ಎಲ್ಲೆಚ್‌ನಲ್ಲಿ ಠಳಾಯಿಸುತ್ತಿರುತ್ತಾರೆ. ಹಾಗಾಗಿ ನಮ್ಮ ಹಳ್ಳಿಯ ಜಮೀನೆಲ್ಲ ಬಂಜರು ಬಿದ್ದಿದೆ.

ಏನನ್ನೂ ಬೆಳೆಯದಿದ್ದರೆ ಊಟಕ್ಕೆ ಏನು ಮಾಡುವುದು? ಒಂದರ್ಧ ಎಕರೆ ಮಾರೋಣವೆಂದರೆ ಅದಕ್ಕೆ ಏನೆಲ್ಲ ಲಿಟಿಗೇಶನ್. ಅಣ್ಣ-ತಮ್ಮ ಬಿಡಿ, ಅಕ್ಕ-ತಮ್ಮ ಅಣ್ಣ-ತಂಗಿ ಕೂಡ ಹಾವು-ಮುಂಗುಸಿ, ಚಿದಂಬರಂ-ಜಯಲಲಿತಾ. ಹಾಗಾಗಿ ನಮ್ಮ ಗೇಟ್ ಆಚಿನ ರಸ್ತೆಯಲ್ಲಿ ಓಡಾಡುವ ಕೋಟ್ಯಾಧೀಶರೂ ದೊಗಲೆ ಚಡ್ಡಿ ಧರಿಸಿ ಬರಿಮೈಯಲ್ಲಿ ಓಡಾಡುತ್ತಿರುತ್ತಾರೆ - ರಜೆ ಅನುಭವಿಸಲೆಂದು ಬೀಚ್‌ನಲ್ಲಿ ಠಳಾಯಿಸುವ ಪಕ್ಕಾ ಅಮೆರಿಕದ ಬಿಲಿಯನೇರ್‌ಗಳ ಥರಾ. ಅಲ್ಲಿನವರು ಕೈಯಲ್ಲಿ ಕೋಲಾ ಹಿಡಿದು ಸೆಲ್‌ಫೋನ್‌ನಲ್ಲೇ ಮಲ್ಟಿ ನ್ಯಾಶನಲ್ ಬಿಸಿನೆಸ್‌ಗಳನ್ನು ಕಂಟ್ರೋಲ್ ಮಾಡುತ್ತಿದ್ದರೆ ಇವರು ಕೋಲಾಡಿಸುತ್ತ, ಗಂಟಲ ಸ್ವರದಲ್ಲೇ ಕುರಿಮಂದೆಯನ್ನು ಕಂಟ್ರೋಲ್ ಮಾಡುತ್ತ ಸಾಗುತ್ತಾರೆ.

ಗೇಟ್ ತೆರೆಯಲು ಬೀಗದಕ್ಕೆ ಹುಡುಕುತ್ತಲೇ ನನ್ನ ತಲೆಯಲ್ಲಿರುವ ಮೆಮೊರಿ ಕಾರ್ಡ್‌ಗಳನ್ನು ಬಹುವೇಗದಲ್ಲಿ ತಿರುವಿ ಹಾಕುತ್ತೇನೆ. ಈತ ಯಾವ ಕೋಟ್ಯಾಧೀಶ ಇರಬಹುದು? ಮುನಿಶಾಮಯ್ಯನೆ ಅಥವಾ ಮುನಿಶಾಮಪ್ಪನೆ ಅಥವಾ ಮುನಿಹನುಮಯ್ಯನೆ? ಮುನಿವೆಂಕಟಪ್ಪ ಅಂತೂ ಅಲ್ಲ, ಏಕೆಂದರೆ ಆತ ಮೊನ್ನೆಯಷ್ಟೆ 50 ರೂಪಾಯಿ ಕೈಗಡ ಒಯ್ದಿರುವುದರಿಂದ ನಾನಾಗಿ ಹುಡುಕಿಕೊಂಡು ಹೋದ ವಿನಾ ಆತನ ದರ್ಶನ ಸುಲಭಕ್ಕೆ ಆಗಲಾರದು. ಮುನಿಹನುಮಯ್ಯ ಕೂಡ ಇರಲಿಕ್ಕಿಲ್ಲ. ಇಷ್ಟೊಂದು ಮುನಿಗಳು ಇರುವುದರಿಂದ ಈ ಊರನ್ನು 'ಬಹುಮುನಿ ಸುಲ್ತಾನ'ರ ಪಾಳ್ಯ ಎಂದುಕೊಳ್ಳಬೇಡಿ. ಹೆಚ್ಚಿನವರೆಲ್ಲ ಪಾಪ, ಅನಕ್ಷರಸ್ಥರು. ಮುನಿಹನುಮಯ್ಯನನ್ನು ಅಪ್ಪಿತಪ್ಪಿ 'ಮುನಿಹನುಮಪ್ಪನವರೇ' ಎಂದು ಕರೆದರೆ ತುಸುವೂ ಮುನಿಸಿಕೊಳ್ಳದ ತಪೋಧನರು.

ಈಗ ಗೇಟ್ ಬಳಿ ನಿಂತವ ಮುನಿಸ್ವಾಮಿ. ಎರಡು ವಾರಗಳ ಹಿಂದಷ್ಟೆ ಅರ್ಜೆಂಟಾಗಿ ನೂರು ರೂಪಾಯಿ ಬೇಕಿತ್ತೆಂದು ಮನೆಯಲ್ಲಿದ್ದ ಹಳೇ ಪಿಕಾಸಿಯನ್ನೇ ಮಾರಲು ಬಂದಿದ್ದ. ನಾನು ಛೀಮಾರಿ ಹಾಕಿದ್ದೆ. ರೈತರಾದವರು ಕೃಷಿ ಉಪಕರಣಗಳನ್ನು ಎಂದೂ ಮಾರಬಾರದು ಎಂದು ಬೈದು, ಕೈಗಡ ಕೊಟ್ಟು ಕಳಿಸಿದ್ದೆ. ಈಗ ಮತ್ತೆ ಬಂದಿದ್ದಾನೆ. ಹಣ ಹಿಂದಿರುಗಿಸಲು ಬಂದಿರಬಹುದೆ?

ಬೊಗಳುತ್ತಿರುವ ಕಾಫಿಯ ಕಾಲರ್ ಹಿಡಿದು, 'ಏನ್ ಬಂದ್ರಿ ಯಜಮಾನ್ರೆ?' ಕೇಳಿದೆ.

ತಲೆ ಕೆರೆದುಕೊಳ್ಳುತ್ತ, 'ಏನಿಲ್ರ, ಹೀಂಗೆ ಬಂದೆ.... ಮಣ್ಣು ಬೇಕ್ರಾ?' ಎಂದು ಅವನು ನನ್ನನ್ನೇ ಕೇಳಿದ. ನಾನು ಏನನ್ನೂ ಹೇಳುವ ಮೊದಲು ಆತನೇ, 'ಒಳ್ಳೇ ಮಣ್ಣು, ಟ್ರ್ಯಾಕ್ಟರ್ ಲೋಡಿಗೆ ಐದು ನೂರು ಕೊಡಿ ಸಾಕು' ಎಂದ.

ಈ ಊರಿನ ತೀರಾ ದೊಡ್ಡ ಕುಳಗಳು ದೊಡ್ಡ ದೊಡ್ಡ ಬಂಡೆಗಳನ್ನೇ ಸಿಡಿಸಿ ಒಡೆದು ಮಾರುತ್ತವೆ. ಮಧ್ಯಮ ಕುಳಗಳು ಹಳ್ಳಕೊಳ್ಳಗಳಲ್ಲಿನ ಮರಳನ್ನು ಸೋಸಿ ಮಾರುತ್ತವೆ. ಮೈನರ್ ಕುಳಗಳು ಮಣ್ಣನ್ನೇ ಮಾರುತ್ತವೆ. ಅಂತೂ ಜರಡಿ ಹಿಡಿದಂತೆ ಈ ಪ್ರಕೃತಿ ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಸಂಪನ್ಮೂಲವನ್ನು ರೆಡಿ ಇಟ್ಟಿದೆ. ಜರಡಿಯ ಮೇಲಿದ್ದುದು ಮೇಲಿನವರಿಗೆ, ಕೆಳಗುದುರುವುದು ಕೆಳಗಿನವರಿಗೆ.

ಗೇಟ್ ಆಚೆ ನಿಂತ ಮುನಿಸ್ವಾಮಿ ತನ್ನ ಮಣ್ಣನ್ನು ಅಟ್ಟಕ್ಕೇರಿಸಿ ಹೊಗಳುತ್ತಿದ್ದ. ಬಾಬಾ ಕೊಡುತ್ತಿದ್ದ ಭಸ್ಮದ ಥರಾ ತೋಳೆತ್ತಿ ಗೇಟಿನ ಕಂಬಿಗಳ ಮಧ್ಯೆ ಕೈತೂರಿಸಿ ಏನನ್ನೋ ಉದುರಿಸಿದ. 'ರವೆ ರವೆ ಸೋಮೀ..... ಕಲರ್ ನೋಡಿ ಹೆಂಗೈತೆ!' ಎನ್ನುತ್ತಿದ್ದ. ನಾನು ತುಸು ಸಮೀಪ ನಿಂತಿದ್ದಿದ್ದರೆ ನನ್ನ ಬಾಯಿಗೇ ಹಾಕುತ್ತಿದ್ದನೋ ಏನೊ. ನಾಳೆ ಯಾರಾದರೂ ಮಣ್ಣು ಸಪ್ಲೈ ಮಾಡುವ ಬ್ರ್ಯಾಂಡೆಡ್ ಕಂಪನಿ ಬಂದರೆ ಈತನಿಗೇ ಟೈ ಕಟ್ಟಿ ಸೇಲ್ಸ್ ಪಿಚ್ ಏರಿಸುವ ಕೆಲಸಕ್ಕೆ ಕಳಿಸಬಹುದೇನೊ. ಟಿವಿ ಜಾಹೀರಾತು ಬಂದರೆ ಇನ್ನೂ ಸಖತ್ತಾಗಿರುತ್ತದೆ. ಇವನ ಮಣ್ಣಿನ ವಾಸನೆಗೆ ಮರುಳಾಗಿ ನಾಲ್ಕು ಹುಡುಗಿಯರು ರ್‍ಯಾಪ್ ಸಂಗೀತದ ಭರ್ಜರಿ ಗಲಾಟೆಯ ಮಧ್ಯೆ ರ್‍ಯಾಂಪ್ ಮೇಲೆ ಮಾರ್ಜಾಲ ನಡಿಗೆಯಲ್ಲಿ ಬರುವಂತೆ ಮಾಡಿದರೆ ಮುನಿಸ್ವಾಮಿಯ ಮಣ್ಣಿಗೇ ಮುಕ್ಕೋಟಿ ಜನರೂ ಮುಗಿಬೀಳುವಂತಾದೀತು.

ನಿಜಕ್ಕೂ ನನ್ನ ತೋಟಕ್ಕೆ ಮಣ್ಣು ಬೇಕಿತ್ತು. ಆದರೆ ಅದಕ್ಕೂ ಮೊದಲು, ಈತನ ಮಣ್ಣು ಕುರಿತಂತೆ ಎರಡು ಪ್ರಶ್ನೆಗಳಿಗೆ ಉತ್ತರ ಬೇಕಿತ್ತು. ಒಂದು, ಈತನಿಗೆ ಮಣ್ಣು ಸಿಕ್ಕಿದ್ದೆಲ್ಲಿ? ಬೆಂಗಳೂರು ಜಿಲ್ಲೆಯಲ್ಲಿ ಮಣ್ಣು ಸಿಗುವುದು ಸುಲಭವಲ್ಲ. ರಸ್ತೆ ಪಕ್ಕದಲ್ಲಿ ಎಲ್ಲೂ ಅಗೆಯುವಂತಿಲ್ಲ. ಈಚೆ ಅಗೆದರೆ ಖಾಸಗಿ ಆಸ್ತಿ; ಚದರ ಅಡಿಗೆ 250 ರೂಪಾಯಿ. ಅದರೀಚೆ ದರಖಾಸ್ತು ಜಮೀನು. ಆಚೆ ಅಗೆದರೆ ಕಂದಾಯ ಭೂಮಿ; ಅದರಾಚೆ ಅಗೆದರೆ ಫಾರೆಸ್ಟು. ಎಲ್ಲೂ ಅಗೆಯುವಂತಿಲ್ಲ. ಈತನಿಗೆ ಮಣ್ಣು ಸಿಕ್ಕಿದ್ದಾದರೂ ಎಲ್ಲಿಂದ? ಎರಡನೆಯ ಪ್ರಶ್ನೆ: ಈತ ತಂದಿದ್ದ ಮಣ್ಣು ಸಾಚಾ ಎಂದು ಪತ್ತೆ ಮಾಡುವುದು ಹೇಗೆ?

ಕೃಷಿ ವಿಜ್ಞಾನಿಗಳು ಮಾತೆತ್ತಿದರೆ 'ಮಣ್ಣು ಪರೀಕ್ಷೆ ಮಾಡಿಸಿ, 'ಮಣ್ಣು ಪರೀಕ್ಷೆ ಮಾಡಿಸಿ' ಎಂದು ಹೇಳುತ್ತಿರುತ್ತಾರೆ. ನಾನು ಪರೀಕ್ಷೆ ಆರಂಭಿಸಿದೆ. ಗೇಟ್ ಬಳಿ ಲಿಖಿತ ಪರೀಕ್ಷೆ ಸಾಧ್ಯವಿಲ್ಲದ್ದರಿಂದ, ಮೇಲಾಗಿ ಇವನು ಅನಕ್ಷರಸ್ಥ ಆಗಿದ್ದರಿಂದ ತೋಂಡಿಪರೀಕ್ಷೆ (ವೈವಾ) ಆರಂಭಿಸಿದೆ.

ನಾನು : ಎಲ್ಲಿ ಸಿಕ್ತು ನಿನಗೆ ಮಣ್ಣು?

ಅವನು : ಅದನ್ನೆಲ್ಲ ಏನ್ ಕೇಳ್ತೀರಿ ಸ್ವಾಮಿ, ಮಣ್ಣು ಇಷ್ಟವಾಯ್ತೊ ಇಲ್ಲವೊ ಅಷ್ಟು ಹೇಳಿ.

ನಾನು : ಇದು ಇಲ್ಲೀಗಲ್ ಮಣ್ಣಲ್ಲ ತಾನೆ?

ಅವನು : ಏನಂದ್ರಿ ಸೋಮಿ?

ನಾನು : ಏನಿಲ್ಲ, ಫಾರೆಸ್ಟ್‌ನಿಂದ ತಂದಿದ್ದಾ?

ಅವನು : ಅದೆಂಗಾಯ್ತದೆ ಸೋಮಿ. ಅವರು ಎಂಟ್ರೀನೇ ಕೊಡಂಗಿಲ್ಲ. ಹಳ್ಳ ಹೊಡ್‌ದು ಬೇಲಿ ಹಾಕ್ಕಂಡವ್ರೆ –

ನಾನು : ಕೆರೆ ದಂಡೆಯಿಂದ ತಂದ್ಯಾ?

ಅವನು : ಇಡೀ ಕೆರೇನೇ ನಾಯ್ಡೂಗೆ ಗುತ್ತಿಗೆ ಕೊಟ್ಬುಬಿಟ್ಟವ್ರಲ್ಲ, ಅಲ್ಲಿ ಗಾಳ ಹಾಕಕ್ಕೂ ಬಿಡೋಲ್ಲ ಅವನು.

ನಾನು : ರೋಡ್‌ಸೈಡ್ ಕಟಿಂಗ್ ಮಾಡಿ ತಂದಿದ್ದಾ?

ಅವನು: ಅದೆಲ್ಲ ಹೆಂಗಾಯ್ತದೆ? ಇಷ್ಟೆಲ್ ಗಾಡಿ ವೋಗ್ತಾ ಬರ್ತಾ ಇರ್ತವೆ....

ನಾನು: (ಕಿಸೆಯಿಂದ ಮೊಬೈಲ್ ತೆಗೆಯುತ್ತ) ನಿಜ ಹೇಳು. ಇಲ್ಲಾಂದ್ರೆ ನಾನೇ ಫೋನ್ ಮಾಡಿ ತಿಳ್ಕತೀನಿ.

ಮುನಿಸ್ವಾಮಿ ಮೌನಿಯಾದ. ಅಲ್ಲಿಗೆ ಪರೀಕ್ಷೆ ಮುಗಿಯಿತು. ಆತ ದನಿ ತಗ್ಗಿಸಿ ಮಣ್ಣು ತನ್ನದಲ್ಲವೆಂದು ಹೇಳಿದ. ಹಳ್ಳಿ ರಸ್ತೆಗೆ ಹೊಸದಾಗಿ ಟಾರ್ ಹಾಕಲು ಗುತ್ತಿಗೆ ಪಡೆದ ವ್ಯಕ್ತಿ, ಟಾರ್ ಹಾಕುತ್ತಲೇ ರಸ್ತೆಯ ಅಕ್ಕಪಕ್ಕದ ಮೂರಡಿ ಅಗಲಕ್ಕೆ ಮಣ್ಣು ಹಾಕಬೇಕಿತ್ತು. ಆತ ಏನೋ ಅಡ್ಜಸ್ಟ್‌ಮೆಂಟ್ ಮಾಡಿ, ಅರಣ್ಯ ಭೂಮಿಯಿಂದ ಕೆಂಪು ಮಣ್ಣನ್ನು ಎತ್ತಿ ತರಿಸಿ ಹಾಕಿಸುವ ವ್ಯವಸ್ಥೆ ಮಾಡಿ ಹೋಗಿದ್ದ. ಟಿಪ್ಪರ್ ಚಾಲಕ ಅದರಲ್ಲೂ ಏನೋ ಅಡ್ಜಸ್ಟ್‌ಮೆಂಟ್ ಮಾಡಿ, ಗುತ್ತಿಗೆದಾರನಿಗೆ ತಿಳಿಯದ ಹಾಗೆ ಅಲ್ಲೊಂದು ಲೋಡ್ ಇಲ್ಲೊಂದು ಲೋಡ್ ಕದ್ದು ತೆಂಗಿನ ತೋಟಗಳಿಗೆ ಮಾರುತ್ತಿದ್ದ. ತೋಟದ ಮಾಲಿಕನಿಗೆ ತಿಳಿಯದ ಹಾಗೆ ಅಲ್ಲಿನ ಮಾಲಿ ಹೇಗೋ ಅಡ್ಜಸ್ಟ್‌ಮೆಂಟ್ ಮಾಡಿ, ಅದರಲ್ಲೂ ಒಂದೆರಡು ಲೋಡ್ ಮಣ್ಣನ್ನು ಮುನಿಸ್ವಾಮಿಯಂಥವರಿಗೆ ದಾಟಿಸುತ್ತಿದ್ದ.

ನಾನೀಗ ಒಂದು ಲೋಡ್ ಮಣ್ಣಿಗೆ 500 ರೂಪಾಯಿ ಕೊಟ್ಟರೆ ಅದರಲ್ಲಿ ಟಿಪ್ಪರ್ ಚಾಲಕನಿಗೆ ನೂರು, ಜೆಸಿಬಿಯವನಿಗೆ ನೂರು, ತೆಂಗಿನ ತೋಟದ ಮಾಲಿಗೆ ಇನ್ನೂರು ಹೋಗಿ ತನಗೆ ನೂರು ಮಾತ್ರ ಉಳಿಯುತ್ತದೆ ಎಂದ. ನಾನು ಮೊಬೈಲ್ ಬಟನ್ ಒತ್ತುತ್ತಿರುವುದನ್ನು ಕಂಡು, ಕೊನೇ ಆಫರ್ ಕೊಟ್ಟ 'ಬೇಕಿದ್ರೆ ಮಣ್ಣು ಬ್ಯಾಡ ಅನ್ನಿ; ಆದರೆ ಫೋನ್‌ಗೀನ್ ಮಾಡಬೇಡಿ ಯಾರಿಗೂ' ಎಂದು ಗೋಗರೆದ. ಯಾಕೆಂದು ಕೇಳಿದೆ.

'ಏನೋ ನಾಕ್ ಕಾಸು ಮಾಡ್ಕಣಕ್ಕೆ ವೊಂಟವ್ರೆ ಇವರೆಲ್ಲ; ನಾವ್ಯಾಕೆ ಅವರ ಬಾಯಿಗೆ ಮಣ್ಣ ಹಾಕಾನ ಬಿಡಿ!' ಎಂದು ಕೈಕೊಡವುತ್ತ ಹೊರಟ.

✵

# ನಾಲ್ಕೇ ಸಾಲಿನ ಕಥೆಗಳು

**- ಬೇಲೂರು ರಾಮಮೂರ್ತಿ**

ಅವಳು ಮತ್ತು ಅವನು ತುಂಬಾ ದಿವಸಗಳಿಂದ ಪರಸ್ಪರ ಪ್ರೀತಿಸುತ್ತಿದ್ದರು
ಏನಾದರಾಗಲಿ ಅಂತ ಮದುವೆ ಆಗೇ ಬಿಡೋಣ ಅಂತ ತೀರ್ಮಾನಿಸಿದರು
ಆದರೆ ಅವರಿಬ್ಬರ ಮದುವೆ ನಡೆಯೋದು ಸಾಧ್ಯವಾಗಲೇ ಇಲ್ಲ - ಏಕೆಂದರೆ
ಅವಳ ಗಂಡನೂ, ಅವನ ಹೆಂಡತಿಯೂ ಡೈವೋರ್ಸ್ ಕೊಡಲು ಒಪ್ಪಲಿಲ್ಲ.

★ ★ ★ ★ ★

ಅವನು ಪೋಲೀಸ್ ನೌಕರನಾದರೂ ಅಷ್ಟೊಂದು ಸಮರ್ಥನಲ್ಲ
ಒಂದು ದಿನ ಇವತ್ತು ಕಳ್ಳನನ್ನು ಹಿಡಿದೇಬಿಡ್ತೀನಿ ಅಂತ ಕಳ್ಳನ ಹಿಂದೆ ಓಡಿದ
ಆದರೆ ಕಳ್ಳನನ್ನು ಹಿಡಿಯೋದು ಅವನಿಂದ ಸಾಧ್ಯವಾಗಲೇ ಇಲ್ಲ - ಏಕೆಂದರೆ
ಅವನ ಹೆಂಡತಿ ಅವನನ್ನು ಬಲವಂತವಾಗಿ ಹಾಸಿಗೆಯಿಂದ ಎಬ್ಬಿಸುತ್ತಿದ್ದಳು

★ ★ ★ ★ ★

ಹತ್ತು ವರ್ಷ ದಾಂಪತ್ಯ ಸವೆಸಿದ ಆ ದಂಪತಿಗಳಿಗೆ ಮಗು ಎಂದರೆ ತುಂಬಾ ಇಷ್ಟ
ತಮ್ಮ ಎಲ್ಲ ಸಂಪಾದನೆಯನ್ನೂ ಆ ಮಗುವಿಗಾಗಿ ಖರ್ಚು ಮಾಡುತ್ತಿದ್ದರು
ಆದರೂ ಅವರ ಮನದಲ್ಲಿ ಏನೋ ಒಂದು ಕೊರಗು ಇತ್ತು - ಏನೆಂದರೆ
ಇಷ್ಟು ವರ್ಷದ ನಮ್ಮದೇ ಆದ ಒಂದು ಮಗು ನಮ್ಮದಾಗಲಿಲ್ಲವಲ್ಲ ಅಂತ

★ ★ ★ ★ ★

ಅವರಿಬ್ಬರದೂ ಭಿಕ್ಷೆ ಬೇಡುವ ದಂಧೆ, ಅದರಿಂದಲೇ ಉದರ ಪೋಷಣೆ
ಕಾಲಿಲ್ಲದವನು ದಾರಿ ತೋರುತ್ತಿದ್ದರೆ ಕಣ್ಣಿಲ್ಲದವನು ಗಾಡಿ ನೂಕುತ್ತಿದ್ದ
ಕಣ್ಣಿಲ್ಲದವನು ಒಂದು ದಿನ ನನಗೆ ಗಾಡಿ ತಳ್ಳಿ ಸುಸ್ತೋ ಸುಸ್ತು ಅಂದರೆ
ಕಾಲಿಲ್ಲದವನು ಈಗ ನೀನು ಕೂತ್ಕೊ ನಾನು ಸ್ವಲ್ಪ ದೂರ ತಳ್ತೀನಿ ಅಂದ

★ ★ ★ ★ ★

ಅವತ್ತು ಗಂಡ ಹೆಂಡತಿಯ ಜಗಳ ಅತಿರೇಕಕ್ಕೆ ಹೋಗಿ ಬಿಟ್ಟಿತ್ತು
ದುಡ್ಡಿನ ವಿಚಾರಕ್ಕಾಗಿ ಅವರಿಬ್ಬರೂ ಜೋರು ಜೋರಾಗಿ ಕಿತ್ತಾಡುತ್ತಿದ್ದರು
ಕೊನೆಗೂ ಗಂಡನೇ ಸೋತು ಜಗಳ ನಿಲ್ಲಿಸೋಣ ಅಂದ - ಏಕೆಂದರೆ
ಹತ್ತು ಲಕ್ಷ ಲಾಟರಿಯ ಫಲಿತಾಂಶ ಬರಲು ಇನ್ನೂ ಒಂದು ತಿಂಗಳಿತ್ತು

★ ★ ★ ★ ★

ಯಜಮಾನರು ನೆಂಟರ ಮನೆ ಸಮಾರಂಭಕ್ಕೆ ಆತುರಾತುರವಾಗಿ ಬಂದರು
ನನಗೆ ಮರೆವು ಅಂತ ಹೇಳ್ತಾ ಇದ್ರಲ್ಲ ನೋಡಿ ಟೈಮ್‌ಗೆ ಸರಿಯಾಗಿ ಬಂದಿದೀನಿ ಅಂದರು
ನೆಂಟರ ಮನೆಯವರು ಯಜಮಾನರ ಮುಖ ನೋಡಿ ನಕ್ಕರು - ಏಕೆಂದರೆ
ಸಮಾರಂಭ ಹಿಂದಿನ ದಿನವೇ ಮುಗಿದು ಹೋಗಿತ್ತು ✵

**ಕಿವಿ - ಕೇಳುವ ಅಂಗವೇ ಆದರೂ ಅದರ ಒಂದು ಭಾಗ ನಮ್ಮ ದೇಹದ ಸಮತೋಲನ ಮಾಡುವ ಕೆಲಸ ನಿಭಾಯಿಸುತ್ತದೆ. ಕೇಳಿಸುವ ಭಾಗಕ್ಕೆ ತೊಂದರೆಯಾದರೆ ಕಿವುಡುತನ ಬರುತ್ತದೆ, ಹಾಗೆಯೇ ಉಳಿದ ಭಾಗಕ್ಕೆ ತೊಂದರೆಯಾದರೆ ತಲೆಸುತ್ತು ಕಿವಿಮೊರೆತ ಉಂಟಾಗುತ್ತದೆ. ಕಿವಿಮೊರೆತಕ್ಕೆ ಉಳಿದಂತೆ ಹಲವಾರು ಕಾರಣಗಳು ಇದ್ದರೂ ಈ ಸೂಕ್ಷ್ಮವಾದ ಅಂಗದ ತೊಂದರೆಯೇ ಬಹುಮಟ್ಟಿನ ಕಾರಣ. ಬಹಳ ಸಲ ಈ ತೊಂದರೆ ಔಷಧಿಗೆ ಒಗ್ಗದು. ಮೊರೆತ ಮುಚ್ಚುವಂತೆ ಶಬ್ದವನ್ನು ಹಿಯರಿಂಗ್ ಏಡ್ ಮೂಲಕ ಕೊಡಬೇಕಾಗುತ್ತದೆ. ಸದ್ಯಕ್ಕೆ ಅದೇ ಉತ್ತರ. ಕಿವಿಯ ಸೂಕ್ಷ್ಮತೆ ಕಡಿಮೆಯಾದ ನಂತರ ಹಿಯರಿಂಗ್ ಏಡ್ ಧರಿಸಿ ಎಲ್ಲರಂತೆಯೇ ಮಾತಿನ ಚಟುವಟಿಕೆಯಲ್ಲಿ ಭಾಗವಹಿಸಬೇಕು, ಅದು ಸಾಮಾನ್ಯ ಜೀವನ.**


**ಡಾ|| ಜಿ. ಪುರುಷೋತ್ತಮ** ಇಡಿ.ಡಿ.

**ವಾಕ್ - ಶ್ರವಣದೋಷ ತಜ್ಞ, ವಿಸ್ಪರ್ ವಾಕ್ - ಶ್ರವಣ ಕೇಂದ್ರ**

# ಮೊಬೈಲ್ ಬ್ಯಾಂಕು.........

- ಗುರು

**ನಾ**ವು ಕೆಲಸಕ್ಕೆ ಸೇರಿದಾಗ ನಮಗೆ ಸ್ಟೈಫಂಡು ಅಂತ ಎಂಬತ್ತು ರೂಪಾಯಿ ಬರುತ್ತಿತ್ತು. ಅದರಲ್ಲಿ ಎರಡೂವರೆ ರೂಪಾಯಿ ಬಸ್ಸಿಗಾಗಿ: ಮಿಕ್ಕದ್ದು ನಮ್ಮ ಊಟತಿಂಡಿ ಸಿನಿಮಾ-ಗಿನಿಮಾ ಖರ್ಚಿಗೆ ಸರಿಹೋಗಿ ಇಪ್ಪತ್ತೇಳು ಇಪ್ಪಂತ್ತೆಂಟನೇ ತಾರೀಖಿಗೆ ಕೈಯಲ್ಲಿ ಹತ್ತು ರೂಪಾಯಿ ಮಿಕ್ಕಿರುತ್ತಿತ್ತು. ಯಾರಾದರೂ ಗೆಳೆಯರು ಸಾಲ ಕೇಳಿದರೆ ಕೊಡಲು! ನಮ್ಮ ತರಬೇತಿ ಮುಗಿದ ನಂತರ ರೆಗ್ಯುಲರ್ ಸಂಬಳಕ್ಕೆ ಅರ್ಹತೆ ಪಡೀತೀವಿ ನೋಡಿ (ಇದನ್ನ ಕಾರ್ಖಾನೆಯ ಪಾರಿಭಾಷಿಕ ಕೋಶದಲ್ಲಿ ಗ್ರೆಡೇಷನ್ ಅಂತ ಕರೀತಾರೆ). ಆಗ ನಮಗೆ ಒಟ್ಟಾರೆಯಾಗಿ ಇನ್ನೂರ ಎಂಬತ್ತೈದು ರೂಪಾಯಿ ಸಂಬಳ ಬರುತ್ತಿತ್ತು. ಆ ಕಾಲಕ್ಕೆ ಅಂದರೆ ನಲವತ್ತು ವರ್ಷ. ಹಿಂದೆ ಇದು ಒಳ್ಳೆಯ ಸಂಬಳವೇ – ನವೆ ಅಂತ ಕೆರೆದುಕೊಂಡು ಏನೂ ಹುಣ್ಣು ಮಾಡಿಕೊಳ್ಳದಿದ್ದರೆ. ಆದರೆ ಸುಮಾರು ಜನ ನವೆ ಇಲ್ಲದಿದ್ದರೂ ಚೂಪು ಉಗುರಿನಿಂದ ಕೆರೆದುಕೊಂಡು ಹುಣ್ಣು ಮಾಡಿಕೊಳ್ಳುವ ಜಾಯಮಾನದವರು – ಅವರಿಗೆ ಯಾವಾಗಲೂ ಹಣಕಾಸಿನ ತೊಂದರೆ. ಇಂತಹ ತೊಂದರೆಯಲ್ಲಿರುವವರಿಗೆ "ಸಹಾಯ" ಮಾಡುವುದಕ್ಕೇ ಎಂದೇ ಸುಮಾರು ಜನ ಆಗ ಹುಟ್ಟಿದ್ದರು ಮತ್ತು ಇಷ್ಟು ವರ್ಷ ಕಳೆದರೂ ಈ ಸಂತತಿ ಮಾತ್ರಾ ಯಾವುದೇ ಫ್ಯಾಮಿಲಿ ಪ್ಲಾನಿಂಗಿಗೆ ಒಳಗಾಗದೇ ಬೆಳೆಯುತ್ತಲೇ ಇದೆ. ಈ ಸಹಾಯಹಸ್ತವನ್ನು ನಾನು ಶೈಲಾಕ್ಸ್ ಎಂದೇ ಕರೆಯುತ್ತಿದ್ದೆ. ಮಸಲಾ ನಿಮಗೆ ನೂರು ಸಾಲ ಬೇಕು ಅನ್ನಿ, ನೂರು ಸಾಲ ಸಿಕ್ಕುತ್ತಿತ್ತು – ಮೊದಲೇ ಅದರಲ್ಲಿ ಇಪ್ಪತ್ತೈದು ರೂಪಾಯಿ ಕಟ್ಟಾಗಿ, ನಂತರ ಹತ್ತು ತಿಂಗಳು ಹತ್ತು ರೂಪಾಯಿನ ಕಂತುಗಳು ಅವರಿಗೆ ಸೇರುತ್ತಿತ್ತು! ಸಾಲ ಮಾಡುವವರೂ ಖುಷಿಯಿಂದ ಇವರುಗಳ ಹತ್ತಿರ ಸಾಲಕ್ಕೆ ಹೋಗುತ್ತಿದ್ದರು; ಸಾಲ ಕೊಡುವವರು ಇವರನ್ನ ಆಡಿಸಿ ಆಡಿಸೀ ಹತ್ತು ಜನರ ಹತ್ತಿರ ಅವರು ಹೇಳಿಸುವಂತೆ ಮಾಡಿ ನಂತರ ಯಾರದ್ದೋ ಮಾತಿಗೆ ತಾವು ಕಟ್ಟು ಬಿದ್ದು ಕೊಡುವ ಹಾಗೆ ಈ ಸಾಲ ಕೊಡುತ್ತಿದ್ದರು. ಸಾಲ ಕೊಡಬೇಕಾದರೆ ಒಂದು ಮಾತು ಅವಶ್ಯವಾಗಿ ಸೇರಿಸುತ್ತಿದ್ದರು – ದುಡ್ಡು ನಂದಲ್ಲಪ್ಪಾ, ನಮ್ಮ ಅತ್ತೇದು ಅವರಿಗೆ ಪ್ರಾಮಿಸ್ ಮಾಡಿ ಇಸ್ಕೊಂಡು ಬಂದಿದೀನಿ ತಡ ಮಾಡಬೇಡ, ಆಯಮ್ಮ ಮನೇಗೇ ಬಂದುಬಿಡ್ತಾರೆ ಲೇಟಾದರೆ...... ಹೀಗೆ. ಕೆಲವು ಸಲ ಅತ್ತೆ ಬೇರೆ ಬೇರೆ ರೂಪ ತೆಗೆದುಕೊಳ್ಳುವುದೂ ಇತ್ತು – ದೊಡ್ಡಮ್ಮ ಆಗುತ್ತಿತ್ತು, ಸೋದರಮಾವ ಆಗುತ್ತಿತ್ತು, ನಮ್ಮ ಪಕ್ಕದ ಮನೆಯವರಾಕೆ, ಹೆಂಡತಿ ಕಡೆಯ ದೂರದ ರಿಲೇಷನ್ನೂ ಆಗುತ್ತಿತ್ತು, ಸಮಯ ಸಂದರ್ಭ ಬಂದಹಾಗೆ.

ಮೊದಮೊದಲು ನನಗೆ ಈ ಸಂಗತಿಯ ಅರಿವೇ ಇರಲಿಲ್ಲ. ಸಾಲಕ್ಕೆ ಅಂತ ಪರದಾಡುವ ಚಾಳಿ ನನಗಿರಲಿಲ್ಲವಾದ್ದರಿಂದಲೋ ಏನೋ. ನನ್ನ ಜತೆ ಕೆಲಸ ಮಾಡುತ್ತಿದ್ದ ಒಬ್ಬರು

ಯಾವಾಗಲೂ ಮತ್ತೊಬ್ಬನ ಜತೆಗೆ ಜಗಳ ಆಡುತ್ತಿದ್ದರು. ಬೆಳಿಗ್ಗೆ ಆತ ಬಂದಕೂಡಲೇ ಯಾವಯಾವುದೋ ಕ್ಷುಲ್ಲಕ ಕಾರಣಕ್ಕೆ ಇಬ್ಬರಿಗೂ ಜೋರು ಜಗಳವಾಗಿಬಿಡೋದು ಮತ್ತು ಈ ವ್ಯಾಜ್ಯ ಪರಿಹರಿಸಲು ನಮಗೆ ಸಾಕು ಸಾಕಾಗುತ್ತಿತ್ತು. ಕೆಲವು ಸಲ ಹೊಡೆದಾಟದ ಮಟ್ಟಕ್ಕೂ ಜಗಳ ಏರುತ್ತಿತ್ತು. ಸುಮಾರು ದಿವಸ ಈ ಅನುಭವವಾದ ನಂತರ ಇಬ್ಬರನ್ನೂ ಬೇರೆ ಬೇರೆ ಇಲಾಖೆಗಳಿಗೆ ವರ್ಗ ಮಾಡಿಸಿಬಿಟ್ಟರೆ ಸಮಸ್ಯೆಗೆ ಪರಿಹಾರ ಸಿಗುತ್ತೆ ಅನಿಸಿತು. ಸರಿ ಅದರ ಬಗ್ಗೆ ಕಾರ್ಯೋನ್ಮುಖನಾದೆ. ಇದರ ಸುಳಿವು ತಿಳಿದ ಇಬ್ಬರೂ ಕೈ ಹೊಸೆಯುತ್ತಾ ಬಂದರು. ಬೇರೆ ಬೇರೆ ಇಲಾಖೆ ಬೇಡಾ ಸಾರ್, ಇನ್ಮೇಲೆ ಜಗಳ ಕಾಯದೇ ಇಲ್ಲೇ ಇರ್ತೀವಿ ಅಂದರು. ಸರಿ ಅಂತ ಐಡಿಯಾ ಡ್ರಾಪಿಸಿದೆವು. ಒಂದು ತಿಂಗಳು ತೆಪ್ಪಗಿದ್ದವರು ಮತ್ತೆ ಉತ್ತರ ದಕ್ಷಿಣ ಆಗಬೇಕೇ?

ಇದೇ ಸಮಯದಲ್ಲಿ ನಾನು ರಜಾದಲ್ಲಿದ್ದಾಗ ಒಂದು ದಿವಸ ಇವರು ಕಾದಾಡಿದ್ದರು. ಅದೇ ಸಂಜೆ ಅವರಿಬ್ಬರನ್ನೂ ಮಾರ್ಕೆಟ್ಟಿನಲ್ಲಿ ಜತೆಜತೆಯಾಗಿ ಓಡಾಡುವುದು ನೋಡಿದೆ. ಮಾರನೇ ದಿವಸ ಕೆಲಸಕ್ಕೆ ಬಂದ ನಂತರ ಇವರ ಜಗಳ ತಿಳಿಯಿತು. ಹಿಂದಿನ ದಿವಸ ಸಂಜೆ ಇಬ್ಬರೂ ಅನ್ಯೋನ್ಯವಾಗಿ ಓಡಾಡ್ತಾ ಇದ್ದರಲ್ರೀ..... ಅಂದೆ.

ಏನೋ ರಹಸ್ಯ ಇದೆ ಅನಿಸಿತು. ಪ್ರತಿದಿವಸ ಶಿಫ್ಟು ಮುಗಿಯಲು ಅರ್ಧಮುಕ್ಕಾಲು ಗಂಟೆ ಮೊದಲು ಇವರಲ್ಲಿ ಒಬ್ಬ ಇನ್ನೊಬ್ಬನನ್ನು ಸಂಜ್ಞೆ ಮೂಲಕ ಕರೆಯುತ್ತಿದ್ದ. ಇಬ್ಬರೂ ಅದೆಲ್ಲೋ ಕಣ್ಮರೆಯಾಗುತ್ತಿದ್ದರು. ಇಬ್ಬರಿಗೂ ತಿಳಿಯದ ಹಾಗೆ ಪತ್ತೇದಾರಿ ನಡೆಸಿದೆ. ಇಬ್ಬರೂ ಹೋಗಿ ನಮ್ಮ ಪ್ಲಾನಿಂಗಿನ ರೂಮಿನ ಒಂದು ಮೂಲೆಯಲ್ಲಿ ಕಬೋರ್ಡುಗಳ ಸಂದಿಯಲ್ಲಿ ಕೂತರು. ಅವರೆದುರು ಒಂದು ಟೇಬಲ್ಲು. ನನ್ನ ಶಿಷ್ಯ ಜೇಬಿನಿಂದ ಕಂತೆ ಕಂತೆ ಹಣ ತೆಗೆದ, ಟೇಬಲ್ಲಿನ ಮೇಲೆ ಹತ್ತು ನೂರು... ಹೀಗೆ ವಿವಿಧ ನೋಟುಗಳು ಹರಡಿದವು. ನೂರರ ಗುಂಪಿನಲ್ಲಿ ಅದನ್ನ ಜೋಡಿಸಿದ. ನೂರರ ಹದಿನಾರು ಗುಂಪು ಆಯಿತು. ಅದನ್ನ ಜಗಳಗಂಟನಿಗೆ ವರ್ಗಾಯಿಸಿದ. ಆತ ಅದನ್ನ ಅಷ್ಟೇ ಜತನದಿಂದ ಮತ್ತೆ ಎಣಿಸಿಕೊಂಡು ಹದಿನಾರೈತೆ ಅಂದ. ಇಬ್ಬರೂ ಅಲ್ಲಿಂದ ಎದ್ದರು.

ಮಾರನೇ ದಿವಸ ಮೊದಲನೇ ಜಗಳವಾಗುತ್ತಿದ್ದ ಹಾಗೇ ನನ್ನ ಶಿಷ್ಯನನ್ನ ಕರೆದೆ.

ಇಬ್ಬರದ್ದೂ ಏನು ವ್ಯವಹಾರ? ಅಂತ ಸಿಡುಕು ಧ್ವನಿಯಲ್ಲಿ ಕೇಳಿದೆ.

ಏನಿಲ್ಲಾ ಸಾರ್... ಅಂದ.

ನಿನ್ನೆ ಸಾಯಂಕಾಲ ಏನು ಮಾಡ್ತಾ ಇದ್ದಿರಿ? ನಿಮ್ಮ ವ್ಯವಹಾರ ಎಲ್ಲಾ ಗೊತ್ತಿದೆ, ನಿಜ ಹೇಳಿದರೆ ಸರಿ.... ಸಿಡುಕು ಧ್ವನಿ ಮುಂದುವರೆದಿತ್ತು.

ರಾಮಚಂದ್ರ ಇವನ ಜಗಳದ ಜತೆಗಾರ – ಬಡ್ಡೀಗೆ ದುಡ್ಡು ಬಿಡ್ತಾನೆ, ಸಾರ್. ಅದನ್ನ ನಾನೇ ನೋಡಿಕೊಳ್ಳೋದು, ಪ್ರತಿದಿವಸ ಸಾಯಂಕಾಲ ಕಲೆಕ್ಷನ್ ದುಡ್ಡು ಅವನಿಗೆ ಕೊಟ್ಟುಬಿಡ್ತೀನಿ, ಅದನ್ನೇ ನಿನ್ನೆ ಎಣಿಸ್ತಾ ಇದ್ದದ್ದು...

ರಾಮಚಂದ್ರ ತಿಂಗಳಿಗೆ ಮೂರು ಪರ್ಸೆಂಟಿನ ಹಾಗೆ ಸಾಲ ಕೊಡುತ್ತಾನಂತೆ. ಅದರ ವಸೂಲಿ ಪ್ರತಿನಿತ್ಯ ಆಗುತ್ತೆ. ವಸೂಲಿ ಕೈ ಕೊಟ್ಟಾಗ ಆತ ಅಪ್‌ಸೆಟ್ ಆಗುತ್ತಾನೆ, ಅದರಿಂದ ಇವರಿಬ್ಬರ ಮಧ್ಯೆ ಜಗಳ ಅಷ್ಟೇ! ಅಂದರೆ ಪ್ರತಿದಿವಸ ವಸೂಲಿ ಕೈ ಕೊಡುತ್ತೆ. ರಾಮಚಂದ್ರನಿಗೆ ಪಾಪ, ನೂರರ ಮೇಲೆ ಎಣಿಸಲು ಬರುವುದಿಲ್ಲವಂತೆ, ಅದರಿಂದ ಇವನು ನೂರರ ಗಣಕದಲ್ಲಿ ಎಣಿಸಲು ಅವನಿಗೆ ನೆರವಾಗುವನಂತೆ! ಅವನು ಒಂದು ದಿವಸ ಕೆಲಸಕ್ಕೆ ಬರಲಿಲ್ಲ ಅಂದರೆ ಎಷ್ಟು ಜನ ಕಂಗಾಲಾಗುತ್ತಾರೆ ಗೊತ್ತಾ ಸಾರ್? ಅವನಿಂದಲೇ ಎಷ್ಟೋ ಸಂಸಾರ ಇವತ್ತು ನೆಮ್ಮದಿಯಿಂದ ಇದೆ....

ರಾಮಚಂದ್ರನಿಗೆ ಮತ್ತೊಂದು ಹೆಸರು ಗೊತ್ತಾ ಸಾರ್? ಅವನನ್ನ ಮೊಬೈಲ್ ಬ್ಯಾಂಕು ಅಂತ ಕರೀತಾರೆ.... ಅಂತ ವಿವರಣೆ ನೀಡಿದ. ಬೇಕೆಂದಾಗ ಯಾವುದೇ ಸಮಯ, ದಿವಸವಿರಲಿ ಕಾಸು ಬೇಕಾದಾಗಲೆಲ್ಲಾ ಹಣ ಪಡೆಯಬಹುದಾದ ಎಟಿಎಂ ಬಗ್ಗೆ ನಾವಿನ್ನೂ ಕಲ್ಪನೆ ಕೂಡ ಹರಿಸಿರದಿದ್ದ ಕಾಲ ಅದು - ಆಗಲೇ ಒಬ್ಬನಿಗೆ ಅದೂ ಅಷ್ಟಾಗಿ ವಿದ್ಯೆ ಇಲ್ಲದವನಿಗೆ ಮೊಬೈಲ್ ಬ್ಯಾಂಕು ಅಂತ ಗೆಳೆಯರು ಕರೆಯಬೇಕಿದ್ದರೆ ಅವನ ವ್ಯವಹಾರ ಪ್ರಜ್ಞೆ, ಸಾಮಾಜಿಕ ಕಳಕಳಿ (!), ಅವನ ಸಾಮ್ರಾಜ್ಯ ಹೇಗಿರಬೇಕು ಅಂತ ಆ ಕ್ಷಣಕ್ಕೆ ಅನಿಸಿ ಬಿಟ್ಟಿತು! ಕಾನೂನಿನ ಬೆಂಬಲವಿಲ್ಲದ, ಶಿಕ್ಷೆಗೆ ಒಳಗಾಗಬಹುದಾದ ವ್ಯವಹಾರ ಇದು, ನಮ್ಮ ನಿಯಮಗಳಲ್ಲಿ ಈರೀತಿ ವ್ಯವಹಾರ ಮಾಡುವುದು ಶಿಕ್ಷಾರ್ಹವಾದದ್ದು. ಅದರಿಂದ ಗುಟ್ಟಿನಲ್ಲಿ ನಡೀತಿದೆಯಂತೆ. ರಾಮಚಂದ್ರನದ್ದೂ ಇವನದ್ದೂ ವ್ಯವಹಾರ ಹೊರ ಜಗತ್ತಿಗೆ - ಅದರಲ್ಲೂ ನಮಗೆ - ಗೊತ್ತಾಗಬಾರದು ಎಂದು ಈ ಜಗಳದ ಹುನ್ನಾರವಂತೆ! ವೈಯಕ್ತಿಕವಾಗಿ ಹೀಗೆ ಬಡ್ಡಿ ಸಾಮ್ರಾಟರು ಸುಮಾರು ಜನರಿದ್ದರೂ ಇದಕ್ಕೆ ಒಂದು ಕಾನೂನಿನ ಚೌಕಟ್ಟನ್ನು ಸೃಷ್ಟಿಸಿಕೊಂಡು ಜನರ ನೆರವಿಗೆ ಧಾವಿಸುತ್ತಿದ್ದವರ ಬಗ್ಗೆ ಇನ್ನೊಂದು ಸಲ ನಿಮಗೆ ವಿವರಿಸುತ್ತೇನೆ!

✵

---

ನವ್ಯಕವಿಯೊಬ್ಬ ನೆಂಟರ ಮನೆಗೆ ಹೋದ. ವಿಪರೀತ
ಶೆಖೆ ಆದರೂ ಫ್ಯಾನ್ ಹಾಕಿ ಅಂತ ಕೇಳೋದು ಹೇಗೆ
ಅಂತ ಸಂಕೋಚದಿಂದ ಕೂತ. ಮನೆಯಾಕೆ ಬಂದು
ನಿಮ್ಮ ಕವಿತೆಗಳನ್ನು ನಾನು ಓದಿದೀನಿ,
ನಾನು ನಿಮ್ಮ ಫ್ಯಾನ್ ಅಂದಳು. ತಕ್ಷಣ ನವ್ಯಕವಿ
ಹಾಗಾದರೆ ಸ್ವಲ್ಪ ಫ್ಯಾನ್ ಆನ್ ಮಾಡಿ ಅನ್ನೋದೇ

- ಸುಕೇಶವ

# ಬಗೆಹರಿದ ಫಜೀತಿ

**- ರಾಮಿ**

**ಕೆ**ಲವು ದಿನಗಳ ಹಿಂದೆ ಸ್ನೇಹಿತ ಪರಮಯ್ಯನನ್ನು ಪಾರ್ಕಿನಲ್ಲಿ ಭೇಟಿಯಾದಾಗ ತಾನೊಂದು ಫಜೀತಿಯಲ್ಲಿ ಸಿಕ್ಕಿಬಿದ್ದಿರುವುದಾಗಿ ಹೇಳಿದ್ದರು. ಫಜೀತಿಯೆಂದರೆ ಮತ್ತೇನಿಲ್ಲ, ಅವರ ದೂರದ ನೆಂಟರ ಮಗನೊಬ್ಬ ಉದ್ಯೋಗ ಅರಸಿಕೊಂಡು ಬೆಂಗಳೂರಿಗೆ ಬಂದವನು ಇವರಲ್ಲಿ ಉಳಿದುಕೊಂಡಿದ್ದ. ಆತನಿಗೆ ಸರಿಯಾದ ಹುದ್ದೆ ಒದಗಿ ಬಂದಿರಲಿಲ್ಲವಂತೆ. ಮೊನ್ನೆ ಇದ್ದಕ್ಕಿದ್ದಂತೆ ಬಂದು ನಾನು ಹರಿದ್ವಾರಕ್ಕೆ ಹೋಗಬೇಕಾಗಿದೆ ಎಂದನಂತೆ. ಇವರು ಒಮ್ಮೆಗೆ ಹೌಹಾರಿ ಅಲ್ಲಿ ಯಾರಿದ್ದಾರೆ ಎಂದು ಪ್ರಶ್ನಿಸಿದರಂತೆ. ಅದಕ್ಕೆ ನಾನು ಬಾಬಾ ರಾಮ್‌ದೇವ್ ಅವರನ್ನು ನೋಡಬೇಕಾಗಿದೆ ಅಂತ ಉತ್ತರ ಬಂತಂತೆ. ಓಹೋ ಯೋಗಾಭ್ಯಾಸಕ್ಕೋ? ಅದಕ್ಕಾಗಿ ಹರಿದ್ವಾರಕ್ಕೆ ಹೋಗಬೇಕಾಗಿಲ್ಲ ಕಣೋ. ಆತ ದೇಶದ ನಾನಾ ಕಡೆಗಳಲ್ಲಿ ಕಾಣಿಸಿಕೊಳ್ಳುತ್ತಾನೇ ಇರ್ತಾರೆ, ಹಾಗೆ ಬೇಕಾದರೆ ಟಿ.ವಿ.ಯಲ್ಲಿ ಬೇಕಾದಷ್ಟು ನೋಡಬಹುದಲ್ಲ ಎಂದರಂತೆ. ಆಗ ಹುಡುಗ ಸಿಡಿಲೆರಗಿದಂತೆ, ನಾನು ಯೋಗ ಕಲಿಯೋಕೆ ಹೋಗೋದಿಲ್ಲ. ಬಾಬಾ ಯುವಸೇನೆ ಅಂತ ಕಟ್ಟುತ್ತಾರಂತಲ್ಲ, ಅದನ್ನು ಸೇರೋಣ ಅಂತ ಇದೀನಿ. ಶಸ್ತ್ರ ಗಿಸ್ತ್ರ ಎಲ್ಲ ಅವರೇ ಕೊಡ್ತಾರಂತೆ. ಅದಕ್ಕೇನೇ ಹೋಗೋಣ ಅನಿಸ್ತಿದೆ ಅಂದನಂತೆ

ಇವರಿಗೋ ಏನು ಹೇಳೋದಂತ ತೋಚಲಿಲ್ಲವಂತೆ. ಅಷ್ಟರಲ್ಲಿ ಆತನೇ ಮುಂದುವರಿಸಿದ. ಜೊತೆಗೆ ಇಲ್ಲಿನ ಸ್ನೇಹಿತ ಕೂಡಾ ಬರ್‍ತಾನೆ. ಸಧ್ಯ ನೀವು ಒಂದಷ್ಟು ದುಡ್ಡು ಕೊಡಬೇಕಾದೀತು. ನನ್ನ ಕೈ ಖಾಲಿಯಾಗಿದೆ ಎಂದಾಗ ಇವರಿಗೆ ಷಾಕ್ ಹೊಡೆದಂತಾಯಿತು. ಯಾತಕ್ಕೆಂದರೆ, ಆತ ಕೇಳಿದ ಮೊತ್ತ ಸಾಕಷ್ಟು ದೊಡ್ಡದಾಗಿಯೇ ಇತ್ತು.

ಏನು ಮಾಡಬೇಕೆಂದು ತಿಳಿಯದೇ ಸ್ವಲ್ಪ ಸಮಯ ಕಾದು ನೋಡೋದು ಒಳ್ಳೆಯದು ಎಂದು ಲೆಕ್ಚರ್ ಕೊಟ್ಟರಂತೆ. ಹರಿದ್ವಾರ ಯಾತ್ರೆಯನ್ನು ಕೆಲವು ದಿನ ಮುಂದೆ ದೂಡೋದು ಒಳ್ಳೇದು ಅಂದರೆ ಆತ ಕೇಳುತ್ತಾನೆಯೇ?

ಮುಂದೆ ಹಾಕುವ ಹಾಗಿಲ್ಲ, ಸ್ನೇಹಿತ ಆಗಲೇ ತನ್ನ ಹುದ್ದೆಗೆ ರಾಜೀನಾಮೆ ಕೊಟ್ಟು ಹೊರಟು ನಿಂತಿದಾನೆ ಎಂಬ ಸಬೂಬು ಬಂತು. ಆತ ಹೋದರೆ ಹೋಗಲಿ, ನೀನಂತೂ ಕೆಲವು ದಿನ ಕಾದು ನೋಡು ಸೇನೆ ಕಟ್ಟುವ ಸಮಾಚಾರ ಏನಾಗುತ್ತದೋ ನೋಡೋಣ ಎಂತ ಖಡಾಖಂಡಿತವಾಗಿ ತಿಳಿಸಿ ಹುಡುಗನನ್ನು ಸುಮ್ಮನಾಗಿಸಿದರಂತೆ. ಒಟ್ಟು ನಿಮಗೆ ಒಳ್ಳೇ ಫಜೀತಿಯಾಯಿತು ಎಂದುಬಿಟ್ಟು ಪರಮಯ್ಯನನ್ನು ಬೀಳ್ಕೊಂಡು ಬಂದಿದ್ದೆ.

ಮತ್ತೆ ಎಂಟೇ ದಿನಗಳಲ್ಲಿ ಪರಮಯ್ಯ ಪಾರ್ಕಿನಲ್ಲಿ ಪ್ರತ್ಯಕ್ಷವಾಗಬೇಕೇ?

ಎಲ್ಲಿಗೆ ಬಂತು ನಿಮ್ಮ ಫಜೀತಿ ಎಂದು ವಿಚಾರಿಸಿದೆ.

ಪರಮಯ್ಯ ಉತ್ಸಾಹದಿಂದಲೇ ಬಗೆಹರಿತು ಕಣ್ರೀ ಅಂತ ಹೇಳಿ ಕೈ ನೀಡಿದರು. ಹೇಗೆ

ಬಗೆಹರೀತು ಅಂತ ಕೇಳಿದ್ದಕ್ಕೆ ಅವರು ಹೇಳಿದ್ದು ಇಷ್ಟು. ನೋಡಿ, ಇವನ ಸ್ನೇಹಿತ ಯುವ ಸೇನೆ ಕಟ್ಟೋಕೆ ಅಂತ ಇದ್ದ ಕೆಲಸ ಬಿಟ್ಟು ಹರಿದ್ವಾರಕ್ಕೆ ಹೊರಟೇಹೋದನಂತೆ. ಇವನು ಸ್ನೇಹಿತ ಬಿಟ್ಟುಹೋದ ಕೆಲಸಕ್ಕೆ ಸೇರಿಕೊಂಡ. ಅಂತೂ ನಮ್ಮ ನೆಂಟರ ಮಗನ ಉದ್ಯೋಗ ಸಮಸ್ಯೆ ಹೀಗೆ ಬಗೆಹರಿಯುತ್ತೆ ಅಂತ ಕನಸು ಮನಸಿನಲ್ಲೂ ಎಣಿಸಿರಲಿಲ್ಲ ಎಂದು ದೊಡ್ಡದಾಗಿ ನಕ್ಕರು.

ಅವರ ಕೈ ಕುಲುಕಿ ಬೀಳ್ಕೊಟ್ಟರು. ನಾನು ಯುವಸೇನೆಯ ಪ್ರಸ್ತಾಪ ಎತ್ತಿ ಫಜೀತಿಗೆ ಸಿಲುಕಿದ ಬಾಬಾ ರಾಮ್ ದೇವ್ ಸಮಾಚಾರವನ್ನು ತಲೆಯಲ್ಲಿ ಮಗುಚಿ ಹಾಕುತ್ತಾ ಮನೆ ಕಡೆ ನಡೆದೆ.

✵

---

**ಕೆಲವರಿಗೆ ನಾಯಿ ಎಂದರೆ ಹೆಚ್ಚು ಇಷ್ಟ, ಕಾರಣ ಏಕೆಂದರೆ...**

- ಮನೆಗೆ ನೀವು ಎಷ್ಟು ತಡವಾಗಿ ಬಂದರೆ ಅಷ್ಟು ಎಕ್ಸೈಟ್ ಅಗಿ ಸ್ವಾಗತಿಸುತ್ತದೆ.
- ಅದನ್ನು ಇನ್ನೊಂದು ನಾಯಿ ಹೆಸರು ಹಿಡಿದು ಕೂಗಿದರೆ ಅದಕ್ಕೆ ಏನೂ ಅನಿಸದು.
- ಏನೂ ಚೆಲ್ಲಿದರೂ ಅದು ಏನೂ ಅನ್ನದು.
- ನಾಯಿಯ ಅಪ್ಪ ಅಮ್ಮ ನಿಮ್ಮ ಮನೆಗೆ ಬರುವುದೇ ಇಲ್ಲ.
- ನಿಮ್ಮ ಮಾತು ಕೇಳಬೇಕು ಎಂದಿದ್ದರೆ ನೀವು ದನಿ ಏರಿಸಲೇಬೇಕು ಎಂದು ಅದಕ್ಕೆ ಗೊತ್ತು.
- ಹೊರಗೆ ಹೋಗಬೇಕಾದಾಗ ನೀವು ಅದಕ್ಕೆ ಕಾಯಬೇಕಾಗಿ ಬರುವುದಿಲ್ಲ. ಏಕೆಂದರೆ ಅದು ೨೪ ತಾಸು ರೆಡಿಯಾಗಿಯೇ ಇರುತ್ತದೆ.
- ನೀವು ಗುಂಡು ಹಾಕಿದರೆ ಅದೇನು ಬೇಜಾರು ಪಟ್ಟಿಕೊಳ್ಳುವುದಿಲ್ಲ.
- ಮಧ್ಯರಾತ್ರಿಯಲ್ಲಿ ಅದು ನಿಮ್ಮನ್ನು ಎಬ್ಬಿಸಿ 'ನಾನು ಸತ್ತು ಹೋದರೆ ನೀವು ಇನ್ನೊಂದು ನಾಯಿ ತರುವುದಿಲ್ಲ ತಾನೆ?' ಎಂದು ಅದು ಕೇಳುವುದಿಲ್ಲ.
- ನಾಯಿ ಮರಿಗಳನ್ನು ಹಾಕಿದರೆ ನೀವು ಜಾಹೀರಾತು ನೀಡಿ ಮರಿಗಳನ್ನು ವಿಲೇವಾರಿ ಮಾಡಬಹುದು.
- ಅದರ ಕುತ್ತಿಗೆಗೆ ಕಾಲರ್ ಹಾಕಿದರೆ ಏನೂ ಪ್ರತಿರೋಧ ತೋರದೆ ಹಾಕಿಸಿಕೊಳ್ಳುತ್ತದೆ.
- ಹಾಗೆಯೇ, ನಾಯಿ ನಿಮ್ಮನ್ನು ಬಿಟ್ಟು ಹೋಗುವಾಗ ನಿಮ್ಮ ಅರ್ಧ ಸಂಪತ್ತನ್ನು ಅದು ಕೊಂಡುಹೋಗುವುದಿಲ್ಲ.

ಇದನ್ನು ಪರೀಕ್ಷಿಸಬೇಕೆ?

ಹಾಗಿದ್ದರೆ ಹೆಂಡತಿಯನ್ನು ಮತ್ತು ನಾಯಿಯನ್ನು ಗರಾಜಿನಲ್ಲಿ ಕೂಡಿ ಹಾಕಿ ಒಂದು ತಾಸಿನ ನಂತರ ಬಾಗಿಲು ತೆಗೆಯಿರಿ. ಈಗ ನಿಮ್ಮನ್ನು ಯಾರು ಖುಷಿಯಿಂದ ನೋಡುತ್ತಾರೆ ಹೇಳಿ ನೋಡೋಣ.

– **ಧೃತರಾಷ್ಟ್ರ**

# ಗುಂಡು ಪಾರ್ಟಿ

- ನಾಗ್ರಾಜ್

**ಎಣ್ಣೆ ನೀರು**

ಅಮ್ಮನ ಅಕ್ಕರೆಯ ಆದೇಶ
ಬಿಡದೇ ನಡೆಸುತ್ತಿರು
ವಾರಕ್ಕೊಮ್ಮೆ ಎಣ್ಣೆ
ನೀರು

**ತಪ್ಪು ಕಲ್ಪನೆ**

ಕುಲುಕುವ ಬಳುಕುವ ನಡೆ
ಮಾದಕ ನೋಟ, ಮಾದಕ ನಗೆ
ಹಾಗೇನಿಲ್ಲ, ಭ್ರಾಂತಿ ನಿಮಗೆ
ಬಾರಿಂದ ಬರುತ್ತಿರುವವರು ಹೊರಗಡೆ !

**ಬೀರ್‌ಬಲ**

ಎರಡು ಬೀರ್‌ಗಳು
ಒಳಗೆ ಹೋದ ನಂತರ
ಹಾರಿಸಿದ್ದರು ನಗೆ ಚಟಾಕಿ
ಬೀರ್ ಬಲ !

**ಮದ್ಯವ್ಯಸನಿ**

ನಿರೀಕ್ಷಿಸುವುದಿಲ್ಲ ಎಂದೆಂದೂ
ಅವರು Divine ಆಗಿರಲೆಂದು
ಎಲ್ಲರ ಆಸೆಯೂ ಒಂದೇ ಒಂದು
ಸಧ್ಯ ಅವರು De-wine ಆಗಲೆಂದು !

**ತರ್ಕ**

ಸತ್ಯ ಕಹಿ
ಬಿಯರ್ ಕಹಿ
ನನಗೆ ಸತ್ಯ
ಪಂಚಪ್ರಾಣ !

**ಭಡ್ತಿ**

ಎರಡು ಪೆಗ್‌ಗಳ
ನಂತರ ಎಲ್ಲರೂ
'ಅಮಲ್' ದಾರ್‍ರೊ
'Shake' ದಾರ್‍ರೊ !



**ಬಿಯರ್**

ಅವರ
ಮೀಸೆ
ನರೆತಿಲ್ಲ
ನೊರೆತಿದೆ !



ಹುರುಳಿ ಕಟ್ಟು...

# ಡಿಮ್ಯಾಂಡಿಂಗ್ ಚೇಂಜ್......!

- ಎಚ್. ಗೋಪಾಲಕೃಷ್ಣ

**ಬಿ**ಎಂಟಿಸಿ ಬಸ್ಸುಗಳಲ್ಲಿ ಓಡಾಡಿದರೆ ಎಂತೆಂತಹ ಅಪರೂಪದ ಅನುಭವಗಳು ಆಗುತ್ತೆ ಅಂತೀರೀ? ಆ ಅನುಭವಗಳಲ್ಲಿ ಅದೇನು ಮನಸ್ಸಿಗೆ ತಟ್ಟುವಂತಹ ಸಂಗತಿಗಳು ಇರುತ್ತವೆ ಗೊತ್ತಾ? ಅಂತಹ ಒಂದು ಪ್ರಸಂಗಕ್ಕೆ ಮೊನ್ನೆ ನಾನು ಸಾಕ್ಷಿಯಾದೆ.....

ಮೊಬೈಲು ಫೋನಿನಲ್ಲಿ ಮಾತನಾಡುತ್ತಲೇ ಒಂದು ಹುಡುಗಿ ಬಸ್ಸು ಹತ್ತಿದಳು. ಮೂರನೇ ಸೀಟಿನಲ್ಲಿ ಕುಳಿತಳು. ಕಂಡಕ್ಟರು ಆಕೆ ಹತ್ತಿರ ಟಿಕೇಟಿಗೆ ಬಂದರು. ಹುಡುಗಿ ಒಂದು ಕೈಯಲ್ಲಿ ಮೊಬೈಲು ಹಿಡಿದೇ ಎಡಗೈನಿಂದ ಪರ್ಸು ತೆರೆದಳು, ನೂರರ ಒಂದು ನೋಟು ನೀಡಿ ಅವಳು ಹೋಗಬೇಕಿರುವ ಸ್ಥಳ ಹೇಳಿದಳು. ಚಿಲ್ಲರೆ ಕೊಡೀಮ್ಮಾ ಚಿಲ್ರೆ ಇಲ್ಲ ಅಂದರು ಕಂಡಕ್ಟರು. ಪರ್ಸು ಹುಡುಕಿದ ಹುಡುಗಿ ನೋ ಚೇಂಜ್ ಅಂದಳು. ಮೊಬೈಲು ಮೂಲಕ ಮಾತು ಮುಂದುವರಿದೇ ಇತ್ತು. ಕಂಡಕ್ಟರು ಅಲ್ಲೇ ನಿಂತರು, ಚಿಲ್ಲರೆ ಬೇಕೇ ಬೇಕು ಅಂತ. ಹುಡುಗಿ ಮುಖ ಸಿಂಡರಿಸಿ ಬ್ಯಾಗು ಹುಡುಕಿ ಚಿಲ್ಲರೆ ತೆಗೆದು ಕೊಟ್ಟಳು. ಚಿಲ್ಲರೆ ಇಟ್ಟುಕೊಂಡು ಯಾಕ್ರೀ ಇಲ್ಲಾ ಅಂತೀರೀ ಅಂತ ಸಿಡುಕುತ್ತಲೇ ಟಿಕೇಟು ನೀಡಿದರು. ಫೋನಿನಲ್ಲಿ ಸಂಭಾಷಣೆ ಮುಂದುವರೆದಿತ್ತು. ಆ ಕಡೆಯಿಂದ ಏನು ಅಡ್ಡ ಮಾತು ಅಂತ ಕೇಳಿರಬೇಕು ಅನಿಸುತ್ತೆ - ಈಕೆ ಬ್ಲಡಿ ಫೂಲ್, ಡಿಮ್ಯಾಂಡಿಂಗ್ ಚೇಂಜ್... ಅಂದಿದ್ದು ಕೇಳಿಸಿತು. ಪೂರ್ತಿ ಮಾತು ಇಂಗ್ಲೀಷಿನಲ್ಲಿಯೇ ನಡೀತಿತ್ತು. ಪಾಪ ಕಂಡಕ್ಟರು ಬ್ಲಡಿ ಫೂಲ್ ಅಂತ ಅನಿಸಿಕೊಂಡನಲ್ಲಾ ನಾನೇ ಕಂಡಕ್ಟರಾಗಿದ್ದರೆ, ಇಂಗ್ಲೀಷು ಬರುವ ಹಾಗಿದ್ದರೆ ಹುಡುಗಿಯನ್ನು ಚೆನ್ನಾಗಿ ಬೈದು ಹೇಗೆ ಪ್ರತಿಕ್ರಿಯಿಸಬಹುದಾಗಿತ್ತು ಅಂತ ಯೋಚಿಸುತ್ತಿದ್ದೆ.

ಆಕೆಯ ಹಿಂದಿನ ಸೀಟಿನಲ್ಲೇ ಕೂತಿದ್ದರಿಂದ ಆಕೆ ಮಾತು ಮುಗಿಸಿದ ನಂತರ ಅವಳಿಗೆ ಬುದ್ಧಿ ಹೇಳಬೇಕು ಅನ್ನುವ ಯೋಚನೆ ಒಂದು ಕಡೆಯಾದರೆ ಬ್ಲಡಿ ಫೂಲ್ ಕಂಡಕ್ಟರಿಗೇ ವಿಷಯ ತಿಳಿಸಿ ಒಂದು ಬಿಟ್ಟಿ ಜಗಳ ನೋಡುವ ಸದಾವಕಾಶವನ್ನು ಹುಟ್ಟುಹಾಕುವ ಬಗ್ಗೆಯೂ ತಲೆ ಓಡುತ್ತಿತ್ತು.

ಐದಾರು ನಿಮಿಷದ ನಂತರ ಕಂಡಕ್ಟರು ಹುಡುಗಿ ಬಳಿ ಬಂದರು. ಪಕ್ಕದಲ್ಲಿ ನಿಂತು ವಿನಯದಿಂದ ಇಂಗ್ಲೀಷಿನಲ್ಲಿ ಕೇಳಿದರು.

ಮೇಡಂ, ನನ್ನನ್ನು ಕುರಿತು ಬ್ಲಡಿ ಫೂಲ್ ಅಂತ ನೀವು ಮೊಬೈಲಿನಲ್ಲಿ ಹೇಳಿದ್ದು ನನಗೆ ಕೇಳಿಸಿತು. ನೀವು ಹೇಳಿದ್ದು ಸರಿಯೇ?

ಹುಡುಗಿ ಕಕ್ಕಾಬಿಕ್ಕಿಯಾದಳು.

ನಾನೆಲ್ಲಿ ಹೇಳಿದೆ ಹಾಗೆ? ನೀವು ಏನೋ ತಪ್ಪು ಕೇಳಿಸಿಕೊಂಡಿದ್ದೀರಿ....

ಸುಳ್ಳು ಹೇಳಬೇಡಿ ಮೇಡಂ. ನಾನು ಈ ವಿಷಯ ಹಾಗೇ ಮರೆಯೋಣ ಅಂತ ಅಂದುಕೊಂಡೆ. ನಮಗೆ ಇಂಗ್ಲೀಷು ಬರೋಲ್ಲಾ ಅಂತ ನೀವು ಹೇಳಿರ್ತೀರಿ ಅಂತ ನನಗೆ ಗೊತ್ತು. ಅಲ್ಲದೇ ಏನು ಬೇಕಾದರೂ ಅಂದು ನಿಭಾಯಿಸ್ತೀನಿ ಅಂತ ಅಂದ್ಕೋಬೇಡಿ... ನಮಗೂ ನಮ್ಮದೇ ಆದ ಸಮಸ್ಯೆಗಳು ಇರ್ತಾವೆ, ನಿಮ್ಮಗಳ ಹತ್ತಿರ ಜಗಳ ಆಡುವ ಮನೋಭಾವ ನಮಗೆ ಇರಲ್ಲ. ಆದರೆ ಈ ರೀತಿ ನೀವು ಮಾತಾಡಿದರೆ ಯಾರಿಗೇ ಆಗಲಿ ಕೋಪ ಬರುತ್ತೆ. ನಾನು ನೀವು ಅಂದಿದ್ದು ಕೇಳಿ ಸುಮ್ಮನೇನೇ ಇದ್ದರೆ ನೀವು ಏನು ಮಾಡ್ತೀರಾ ಅಂದರೆ ಇದೇ ಭಾಷೆ ಮುಂದುವರಿಸ್ತೀರಿ. ಎಲ್ಲಾ ಕಂಡಕ್ಟರ್ರೂ ನನ್ನ ತರಹ ಇರಲ್ಲ. ನಿಮ್ಮ ಬೈಗುಳ ಕೇಳಿದ ಕೂಡಲೇ ಜಗಳಕ್ಕೆ ಇಳೀತಾರೆ, ಹೊಡೆದಾಟಗಳು ಆಗುತ್ತವೆ. ಬಸ್ಸಿನ ಕಂಡಕ್ಟರುಗಳು ರೌಡಿಗಳು ಅಂತ ನೀವು ಹೇಳಿಕೊಂಡು ಬರ್ತೀರಿ... ದೊಡ್ಡ ಸಮಸ್ಯೆ ಶುರುವಾಗುತ್ತೆ. ನಾವು ಸ್ಟ್ರೈಕು ಮಾಡಬೇಕಾಗುತ್ತೆ, ಬಸ್ಸು ಸರ್ವೀಸು ನಿಲ್ಲುತ್ತೆ, ನಿಮ್ಮ ಪರವಾಗಿ ನೂರು ಜನ ನಿಂತರೆ ನಮ್ಮ ಪರವಾಗಿ ಅಷ್ಟೇ ಜನ ನಿಲ್ತಾರೆ... ಯಾರಿಗೆ ಇದರಿಂದ ಪ್ರಯೋಜನ ಹೇಳಿ?....

ಏನು ಸಾರ್, ನಾನು ಹೇಳುತ್ತಿರೋದೂ ಸರೀನಾ? ಅಂತ ನನ್ನ ಕಡೆ ತಿರುಗಿದರು. ಏನು ಉತ್ತರ ಹೇಳಲಿ? ಹುಡುಗಿ ಕಡೆ ನೋಡಿದೆ. ಪಾಪ ಅವಳ ಚಿಕ್ಕ ಬದುಕಿನಲ್ಲಿ ಮೊಟ್ಟಮೊದಲ ಬಾರಿಗೆ ಅವಳಿಗೆ ಒಬ್ಬ ಬಸ್ಸಿನ ಕಂಡಕ್ಟರು ನೀತಿಪಾಠ ಹೇಳಿಬಿಟ್ಟಿದ್ದ. ಹುಡುಗಿ ರೇಗಬಹುದು, ನಿನ್ನ ಮೇಲೆ ದೂರು ಸಲ್ಲಿಸ್ತೀನಿ, ನಿನ್ನನ್ನ ಕೆಲಸದಿಂದ ಕಿತ್ತು ಹಾಕಿಸ್ತೀನಿ ಅಂತೆಲ್ಲಾ ಹೇಳಬಹುದು ಅಂತ ಯೋಚಿಸುತ್ತಲೇ ಮೇಡಂ ನೀವು ಹಾಗೆ ಮಾತನಾಡಬಾರದಿತ್ತು.... ಅಂತ ಹೇಳಲು ಸಿದ್ಧ ಮಾಡಿಕೊಳ್ಳುತ್ತಿದ್ದೆ.

ಹುಡುಗಿ ಸೀಟಿನಿಂದ ಎದ್ದು ನಿಂತಳು. ಕೈಯಲ್ಲಿದ್ದ ಬ್ಯಾಗನ್ನ ಸೀಟಿನ ಮೇಲೆ ಇರಿಸಿದಳು. ಒಂದು ಕ್ಷಣ ಉಸಿರೆಳೆದುಕೊಂಡಳು. ನಂತರ ಎರಡೂ ಕೈ ಜೋಡಿಸಿದಳು.

ಸಾರಿ ಸರ್, ದಯವಿಟ್ಟು ಕ್ಷಮಿಸಿ.... ಅಂದಳು!

ದೊಡ್ಡದಾಗಬಹುದಾಗಿದ್ದ ಒಂದು ಸಮಸ್ಯೆಯನ್ನು ಹುಡುಗಿ ಎಷ್ಟು ನಿರಾಯಾಸವಾಗಿ ಪರಿಹರಿಸಿದಳು ಅಂತ ಭೇಷ್ ಹೇಳಲು ಹೊರಟವನಿಗೆ ನಮ್ಮ ಕಂಡಕ್ಟರು ಎಂಥಹ ಸಂಭಾವಿತ ಅನಿಸಿತು. ತಪ್ಪನ್ನು ಅರಿವು ಮಾಡಿಸಿದ ಆತನ ಬಗ್ಗೆ ಅಭಿಮಾನ ಹುಟ್ಟುತ್ತಿರುವಂತೆಯೇ ತಪ್ಪನ್ನು ಒಪ್ಪಿಕೊಂಡ ಹುಡುಗಿ ಬಗ್ಗೆಯೂ ಅದೇ ಅಭಿಮಾನ ಮೂಡಿತು!

ಬಿಎಂಟಿಸಿ ಬಸ್ಸುಗಳು ಒಳ್ಳೊಳ್ಳೆಯ ಪಾಠಗಳನ್ನು ರೂಪಿಸುವ ಸ್ಥಳ ಅಂತ ಅದರ ಮೇಲಿನ ಅಭಿಮಾನ ಹೆಚ್ಚಿದೆ.

✵

---

"ನಗ"ದೇ ಇದ್ದರೆ ಇನ್ನೇನೂ (ಇನ್ಯಾರೂ) ಬೇಡ ಅನಿಸುತ್ತದೆ
ನಗದೇ ಇದ್ದರೆ ಜೀವನವೇ ಬೇಡ ಅನಿಸುತ್ತದೆ
'ನಗ'ದು ಎಂದೂ ನಗುವುದಿಲ್ಲ, ಹಾಗೇ
'ನಗ'ದ ಸುತ್ತ ಇರುವವರೂ ನಗುವುದಿಲ್ಲ
– ಸುಕೇಶವ